ಬೆಲೆ: ಎರಡು ಆಣೆ

ವರ್ಗಣಿ ದರ
( ಅಂಚೆವೆಚ್ಚ ಸೇರಿ )
ವರ್ಷಕ್ಕೆ ರೂ. ೬-೪-೦
೬ ತಿಂಗಳಿಗೆ ,, ೩-೪-೦
೩ ತಿಂಗಳಿಗೆ ,, ೧-೧೨-೦
ವ್ಹಿ. ಪಿ. ಮೂಲಕ ತರಿಸಿಕೊಂಡಲ್ಲಿ ೫ ಆಣೆ ಹೆಚ್ಚಿಗೆ ಬೀಳುವದು.

# ಕರ್ಮವೀರ

KARMAVEER
WEEKLY
HUBLI
★
APRIL 15
1946

ಸಂಪಾದಕರು : ಹ. ರಾ. ಪುರೋಹಿತ, ಎಂ. ಎ. ]
ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ
[ Editor : H. R. Purohit, M. A.

ಸಂಪುಟ ೧೮ ] 卐 ಹುಬ್ಬಳ್ಳಿ ಸೋಮವಾರ ತಾರೀಖು ೧೫ — ೪ — ೧೯೪೬ 卐 [ ಸಂಚಿಕೆ ೨

# ಜಾಗತಿಕ ಆಹಾರ ಕೊರತೆ

## ಯುದ್ಧ, ಅನಾವೃಷ್ಟಿ, ಬಿರುಗಾಳಿ ಮೊದಲಾದವುಗಳೇ ಕಾರಣ

### ಉಳಿಕೆ ದೇಶಗಳಿಂದ ಧಾನ್ಯ ಬರದಿದ್ದರೆ ಪರಿಸ್ಥಿತಿ ಭೀಕರವಾಗಬಹುದು

### ಎಣಿಸಿದಷ್ಟು ಧಾನ್ಯ ಬಂದರೆ ಹಿಂದುಸ್ತಾನ ಅಗಸ್ಟ ಕೊನೆಯ ವರೆಗೆ ಜೀವ ಹಿಡಿಯುವದು

ಯುದ್ಧಾನಂತರ ಜಾಗತಿಕ ಪರಿಸ್ಥಿತಿ ಮತ್ತಷ್ಟು ಕೆಡಹತ್ತಿದೆ. ಶಾಶ್ವತವಾದ ಶಾಂತಿಯಂತೂ ಯಾವ ದೇಶದಲ್ಲಿಯೂ ಉಂಟಾಗಿರುವುದಿಲ್ಲ. ಎಲ್ಲೆಲ್ಲಿಯೂ ಅಸಂತೋಷ, ಅಸಮಾಧಾನ, ಅತೃಪ್ತಿ, ದ್ವೇಷ, ಅಸೂಯೆ ಮುಂತಾದವುಗಳು ಕಾಣಬರಹತ್ತಿವೆ. ಎಲ್ಲೆಡೆ ಸಮತೆ, ಸ್ವಾತಂತ್ರ್ಯವನ್ನು ಸಂಸ್ಥಾಪಿಸುವುದಕ್ಕಾಗಿ ಯುದ್ಧವನ್ನು ಹೋರಾಡುತ್ತೇವೆಂದು ಜಗತ್ತಿನ ಪ್ರಮುಖ ರಾಷ್ಟ್ರಗಳ ಭೀಕರ ಯುದ್ಧವನ್ನೇನೊ ಹೋರಾಡಿದವು. ಜರ್ಮನಿ ಜಪಾನ, ಇಟಲಿಗಳ ಪರಾಭವವೂ ಆಯಿತು ಆದರೆ ಉದ್ದಿಷ್ಟ ಮಾತ್ರ ಸಾಧಿಸಲಿಲ್ಲ. ಇದಕ್ಕೆ ಜಾಗತಿಕ ಪರಿಸ್ಥಿತಿ ಮಾತ್ರವೆ ಕಾರಣವಾಗಿರದೆ ಆಯಾ ರಾಷ್ಟ್ರಗಳ ಸ್ವಾರ್ಥ, ಮಹತ್ವಾಕಾಂಕ್ಷೆ, ಪ್ರಭುತ್ವ ಪ್ರಸ್ಥಾಪನೆಯ ಹಂಬಲ ಇವೇ ಮುಖ್ಯ ಕಾರಣವೆಂದು ಹೇಳಬಹುದು. ಈ ರೀತಿ ಅಸಂತೋಷವಷ್ಟೆ ಜಗತ್ತಿನಲ್ಲಿ ಮನೆಮಾಡಿರದೆ ಆಹಾರಾಭಾವವೂ ಹೆಚ್ಚಾಗಿ ಕಂಡು ಬರಹತ್ತಿದೆ. ಎಲ್ಲೆಲ್ಲಿಯೂ ಅನ್ನದ ಕೂಗು ಕೇಳಬರಹತ್ತಿದೆ. ಈ ಅನ್ನದ ಕೊರತೆಯನ್ನು ಎಂತು ಹೋಗಲಾಡಿಸಬೇಕೆಂದು ಸಂಯುಕ್ತ ರಾಷ್ಟ್ರಗಳು ಇದೀಗ ವಿಚಾರವಿನಿಮಯ ನಡೆಸಿವೆ.

#### ಜಾಗತಿಕ ಆಹಾರ ಕೊರತೆ

ಈ ಆಹಾರದ ಕೊರತೆ ಯಾವುದೊಂದು ರಾಷ್ಟ್ರದಲ್ಲಿ ಅಷ್ಟೇ ಇಲ್ಲ, ಆದರೆ ಇಡೀ ಜಗತ್ತಿನಲ್ಲಿದೆ. ಬ್ರಿಟಿಶ್ ಸರಕಾರದವರು ಹೊರಡಿಸಿದ ಶ್ವೇತಪತ್ರಿಕೆಯಲ್ಲಿ ಜಾಗತಿಕ ಆಹಾರ ಪರಿಸ್ಥಿತಿಯನ್ನು ವಿಮರ್ಶಿಸಿ ಅದನ್ನೆದುರಿಸಬೇಕಾದರೆ ಯಾವ ಉಪಾಯ ಕೈಕೊಳ್ಳುವುದವಶ್ಯವಾಗಿದೆಂದು ಪ್ರತಿಪಾದಿತವಾಗಿದೆ. ಈ ಆಹಾರಾಭಾವದ ಜೊತೆಗೆ ನಿರುದ್ಯೋಗಿತನವೂ ತಾಂಡವನೃತ್ಯ ಮಾಡುತಲಿದೆ. ಇವೆರಡೂ ಪ್ರಶ್ನೆಗಳು ಇಂದು ಸಂಯುಕ್ತ ರಾಷ್ಟ್ರಗಳ ತಲೆ ತಿನ್ನಹತ್ತಿವೆ. ಆಹಾರ ಪದಾರ್ಥಗಳಲ್ಲಿ ಹೆಚ್ಚಾಗಿ ಜೋಳ ಗೋದಿ ಮೊದಲಾದ ರೊಟ್ಟಿ ಕಾಳುಗಳು ಮತ್ತು ಅಕ್ಕಿ ವಿಶೇಷ ಕಡಿಮೆ ಎನಿಸುತ್ತದೆ. ಮಾಂಸದ ಕೊರತೆಯೂ ಕೆಲ ಕಡೆ ಇದೆ. ವಿಶೇಷತಃ ಸೈನ್ಯ ಖಾತೆಯಲ್ಲಿಯ ನವಕರರು ಹೆಚ್ಚಾಗಿ ಮಾಂಸ ಬೇಡಹತ್ತಿರುವುದರಿಂದ ಅದರ ಕೊರತೆಯಾಗಿದೆ. ಅತಿ ಪೂರ್ವ ರಾಷ್ಟ್ರಗಳು ಯಾವಾಗಲೂ ಧಾನ್ಯಗಳನ್ನು ನಿರ್ಯಾತ ಮಾಡುತಲಿದ್ದವು. ಆದರೀಗ ಅವು ಕಾಳಗಳನ್ನು ಆಯಾತ ಮಾಡಿಕೊಳ್ಳುವ ಪರಿಸ್ಥಿತಿ ಪ್ರಾಪ್ತವಾದ್ದರಿಂದ ಆಹಾರ ಪದಾರ್ಥಗಳ ಕೊರತೆ ಹೆಚ್ಚಿದೆ. ಅಂತೆಯೆ ಈ ಪೂರ್ವ ರಾಷ್ಟ್ರಗಳಲ್ಲಿನ ಪರಿಸ್ಥಿತಿ ಬದಲಾಗುವ ವರೆಗೆ ಆಹಾರ ಪರಿಸ್ಥಿತಿ ಸುಧಾರಿಸಲಾರದು. ಸಕ್ಕರೆ ಮಾತ್ರ ಈ ಸಲ ವಿಪುಲವಾಗಿ ಸಿಕ್ಕಬಹುದೆಂದು ಅಂದಾಜು. ಏಕೆಂದರೆ ಯುರೋಪಿನಲ್ಲಿ ಮತ್ತು ಪೂರ್ವ ರಾಷ್ಟ್ರಗಳಲ್ಲಿ ಸಕ್ಕರೆ ಹೆಚ್ಚಾಗಿ ಉತ್ಪತ್ತಿಯಾಗುವ ಸಂಭವವಿದೆ.

#### ಧಾನ್ಯದ ಕೊರತೆ ಏಕೆ?

ಯುದ್ಧದ ಮೂಲಕ ಜನರೆಲ್ಲ ಬೇರೆ ಉದ್ಯೋಗಗಳಲ್ಲಿ ತೊಡಗಿದ್ದರಿಂದ ಸಾಗುವಳಿ ಭೂಮಿ ಕ್ಷೇತ್ರ ಕಡಮೆಯಾಯಿತು. ಯುದ್ಧ ಪೂರ್ವದಲ್ಲಿಯ ಕೇವಲ ನೂರಕ್ಕೆ ೨೩ ರಷ್ಟು ಕ್ಷೇತ್ರ ಮಾತ್ರ ಈಗ ಸಾಗುವಳಿಯಲ್ಲಿದೆ. ಅದರಲ್ಲಿಯೂ ಅನಾವೃಷ್ಟಿ, ಗೊಬ್ಬರದ ಅಭಾವ ಜನಬಲದ ಕೊರತೆಯ ಮೂಲಕ ಬೆಳೆಯೂ ಕಡಮೆ ಅಂದರೆ ಕೇವಲ ಮೂರು ನಾಲ್ಕಾಂಶ ಬಂದಿತು. ಯುದ್ಧ ಪೂರ್ವದಲ್ಲಿ ೫೯೦ ಲಕ್ಷ ಟನ್ ಆಹಾರ ಪದಾರ್ಥಗಳ ಉತ್ಪತ್ತಿಯಾಗಿದ್ದರೆ ೧೯೪೪ ರಲ್ಲಿ ಕೇವಲ ೪೬೦ ಲಕ್ಷ ಟನ್, ೧೯೪೫-೪೬ ರಲ್ಲಿ ಕೇವಲ ೩೧೦ ಲಕ್ಷ ಟನ್ ಆಹಾರ ಪದಾರ್ಥಗಳ ಉತ್ಪತ್ತಿಯಾಗಿದೆ. ಯುದ್ಧ ಪೂರ್ವದಲ್ಲಿ ಆಯಾತವು ಕೇವಲ ೩೭ ಲಕ್ಷ ಟನ್ ಇದ್ದರೆ ಈಗ ಅದು ೧೫೬ ಲಕ್ಷ ಟನ್ನಿಗೇರಿದೆ. ಹಿಂದುಸ್ತಾನ ಚೀನ ಉತ್ತರ ಆಫ್ರಿಕಾ ದಕ್ಷಿಣ ಆಫ್ರಿಕಾಗಳು ಪ್ರಾಮುಖ್ಯವಾಗಿ ಭತ್ತ ಮತ್ತು ಗೋವಿನ ಜೋಳ ಬೆಳೆವ ನಾಡಾಗಿದ್ದರೂ ಯುದ್ಧ ಪೂರ್ವದಲ್ಲಿ ಅವು ಕೇವಲ ೨೪ ಲಕ್ಷ ಟನ್ ಆಹಾರಪದಾರ್ಥಗಳನ್ನು ತರಿಸಿಕೊಳ್ಳುತಿದ್ದರೆ ಈಗ ೧೦೭ ಲಕ್ಷ ಟನ್ ಆಹಾರ ಪದಾರ್ಥಗಳನ್ನು ತರಿಸಿಕೊಳ್ಳಬೇಕಾಗಿದೆ. ಅನಾವೃಷ್ಟಿ ಬೆಳೆಗೇಡಗಳೇ ಇದಕ್ಕೆ ಕಾರಣ. ಈ ರೀತಿ ಯುರೋಪ, ಆಫ್ರಿಕಾ ಮತ್ತು ಅತಿಪೂರ್ವ ದೇಶಗಳಲ್ಲಿ ೨೦೦ ಲಕ್ಷ ಟನ್ ಆಹಾರ ಪದಾರ್ಥಗಳನ್ನು ಹೊರಗಿನಿಂದ ತರಿಸಿಕೊಳ್ಳಬೇಕಾಗುತ್ತದೆ. ಅಲ್ಲದೆ ಸಿಯಾಮ ಮತ್ತು ಬ್ರಹ್ಮದೇಶಗಳಲ್ಲಿ ಬರಬಹುದಾದ ಬೆಳೆಗಿಂತ ೧೦೦ಕ್ಕೆ ೬೦ ರಷ್ಟು ಕಡಮೆ ಬೆಳೆ ಬಂದಿದೆ.

#### ಗೋದಿನಾಡಿನಲ್ಲಿ ವಿಪುಲತೆ

ಅಮೇರಿಕೆ, ಕಾನಡಾ, ಅರ್ಗೆಂಟಾಯಿನ್, ಆಸ್ಟ್ರೇಲಿಯಾಗಳಲ್ಲಿ ಗೋದಿ ಬೆಳೆ ಚೆನ್ನಾಗಿಲ್ಲದಿದ್ದರೆ ಜಗತ್ತಿನ ಪರಿಸ್ಥಿತಿ ಅತ್ಯಂತ ಭೀಕರವಾಗುತಿತ್ತು. ಯುದ್ಧಪೂರ್ವದಲ್ಲಿ ಈ ರಾಷ್ಟ್ರಗಳು ಕೇವಲ ೩೭೦ ಲಕ್ಷ ಟನ್ ಗೋದಿಯನ್ನು ಉತ್ಪಾದಿಸುತಿದ್ದರೆ ಈ ಸಲ ೪೬೦ ಲಕ್ಷ ಟನ್ ಗೋದಿ ಬೆಳೆದಿವೆ. ಈ ಹೆಚ್ಚಿನ ಉತ್ಪಾದನೆ ಜೊತೆಗೆ ಧಾನ್ಯಗಳ ನುರಿತವೂ ಹೆಚ್ಚಿದೆ. ಈ ದೇಶಗಳಲ್ಲಿ ಮೊದಲಿಗಿಂತ ೮೦ ಲಕ್ಷ ಟನ್ ಧಾನ್ಯಗಳು ಈಗ ಹೆಚ್ಚಾಗಿ ನುರಿಸಲ್ಪಡಹತ್ತಿವೆ. ಯುದ್ಧದ ಮೂಲಕ ಸಾರಿಗೆ ಹಡಗಗಳ ಕೊರತೆಯಾದ್ದರಿಂದ ಈ ದೇಶಗಳಲ್ಲಿ ಧಾನ್ಯದ ಸಂಗ್ರಹವೂ ಹೆಚ್ಚಾಗಿ ಉಳಿಯಿತು. ಸಾಮಾನ್ಯವಾಗಿ ಯುದ್ಧ ಪೂರ್ವದಲ್ಲಿ ೧೧೭ ಲಕ್ಷ ಟನ್ ಸಂಗ್ರಹವಿದ್ದರೆ ೧೯೪೩ ರ ಕೊನೆಯಲ್ಲಿ ಈ ಅಂಕೆ ೪೫೦ ಲಕ್ಷ ಟನ್ ಕ್ಕೇರಿತ್ತು. ಈ ವರ್ಷ ಯುದ್ಧಪೂರ್ವಕ್ಕಿಂತ ೧೨೦ ಲಕ್ಷ ನಿರ್ಯಾತ ಹೆಚ್ಚಿತು ಇದನ್ನೆಲ್ಲ ಲೆಕ್ಕ ಹಾಕಿದರೆ ಹೊರನಾಡುಗಳಿಗೆ ಅಮೇರಿಕೆ ಮೊದಲಾದ ದೇಶಗಳಿಂದ ಕೇವಲ ೧೨೦ ಲಕ್ಷ ಟನ್ ಗೋದಿಯನ್ನು ಮಾತ್ರ ಅಪೇಕ್ಷಿಸಬಹುದಾಗಿದೆ. ಆದರೆ ಯುರೋಪ ಆಫ್ರಿಕಾ ಏಶಿಯಾ ಖಂಡಗಳಲ್ಲಿಯ ಕೊರತೆ ಭಾಗಗಳಿಗೆ ಈಗ ೨೦೦ ಲಕ್ಷ ಟನ್ ಕಾಳು ಬೇಕಾಗಿವೆ. ಆಯಾ ರಾಷ್ಟ್ರಗಳಲ್ಲಿ ಎಣಿಸಿದಷ್ಟು ಕಾಳಿನ ಉತ್ಪತ್ತಿ ಆಗದ್ದರಿಂದ ಹೊರನಾಡುಗಳಿಗೆ ಹೆಚ್ಚು ಕಾಳು ಕಳಿಸುವದು ಶಕ್ಯವಿಲ್ಲದಂತಾಗಿದೆ. ಯುದ್ಧ ಮೂಲಕ ಸಾಗುವಳಿ ಕ್ಷೇತ್ರ ಕಡಿಮೆಯಾಯಿತು. ಅಲ್ಲದೆ ಕಲ್ಲಿದ್ದಲಿ ಮತ್ತು ಎಣ್ಣೆಯ ಕೊರತೆಯಾದ್ದರಿಂದ ಕಾಳುಗಳನ್ನು ಉರುವಲನ್ನಾಗಿ ಉಪಯೋಗಿಸಿದ್ದರಿಂದಲೂ ಈ ದೇಶಗಳಲ್ಲಿ ಕಾಳಿನ ಸಂಗ್ರಹ ಕಡಮೆಯಾಗಿದೆ. ದನಗಳಿಗೂ ಈ ದೇಶಗಳಲ್ಲಿ ಕಾಳು ಹೆಚ್ಚಾಗಿ ಹಾಕುತಿರುವರು. ಯುದ್ಧ ಪೂರ್ವದಲ್ಲಿ ೮೫ ಲಕ್ಷ ಟನ್‌ದಷ್ಟು ಕಾಳು ದನಕರುಗಳಿಗೆ ಹಾಕುತಿದ್ದರೆ ೧೯೪೩-೪೪ರಲ್ಲಿ ಅದು ೧೮೦ ಲಕ್ಷ ಟನ್‌ಕ್ಕೇರಿತ್ತು. ಇಂದು ಆ ಸಂಖ್ಯೆ ೧೦೦ ಲಕ್ಷ ಟನ್ನಿಗೆ ಇಳಿದಿದೆ.

ಅನಾವೃಷ್ಟಿಯಿಂದ ಉತ್ತರ ಅಫ್ರಿಕಾ, ದಕ್ಷಿಣ ಅಫ್ರಿಕಾ, ಹಿಂದುಸ್ತಾನ ಮತ್ತು ಮಧ್ಯಪೂರ್ವ ರಾಷ್ಟ್ರಗಳಲ್ಲಿ ಬಹಳ ಹಾನಿಯಾಗಿದೆ. ಅದರಲ್ಲಿಯೂ ಯುದ್ಧಕಾಲದಲ್ಲಿ ಧಾನ್ಯಗಳನ್ನು ವಿಪರೀತ ಹಾಳು ಮಾಡುವ ಪ್ರವೃತ್ತಿ ಬೆಳೆದದೆ. ಈಗಲೂ ಅದೇ ಪ್ರವೃತ್ತಿ ಕಂಡು ಬರುತಿರುವದರಿಂದ ಪರಿಸ್ಥಿತಿ ಹೆಚ್ಚು ಭೀಕರವಾಗಹತ್ತಿದೆ.

ಸದ್ಯದ ಪರಿಸ್ಥಿತಿ ಮುಂದಿನ ವರ್ಷದಲ್ಲಿಯೂ ಸುಧಾರಿಸುವಂತೆ ತೋರುವದಿಲ್ಲ. ಪೂರೈಕೆ ಸುಧಾರಿಸುತ್ತ ನಡೆದಂತೆ ಆಹಾರ ಪದಾರ್ಥಗಳ ನುರಿತವೂ ಹೆಚ್ಚುತ್ತದೆ. ಅನಾವೃಷ್ಟಿ ಮುಂತಾದ್ದರಿಂದ ಬರುವ ವರ್ಷ ಬರ ಬಿದ್ದರೆ ಪರಿಸ್ಥಿತಿ ಹೆಚ್ಚು ಭಯಾನಕವಾಗುವದು. ಏಕೆಂದರೆ ಮುಂದಿನ ವರ್ಷಕ್ಕಾಗಿ ಕಾಳಿನ ಸಂಗ್ರಹವು ಸ್ವಲ್ಪವೂ ಉಳಿಯುವ ಸಂಭವವಿಲ್ಲ.

#### ಹಿಂದುಸ್ತಾನದಲ್ಲಿ

ಹಿಂದುಸ್ತಾನದಲ್ಲಿ ಅನೇಕ ಭಾಗಗಳಲ್ಲಿ ಅನಾವೃಷ್ಟಿ ಮತ್ತು ಉಳಿದ ಅನಾನುಕೂಲತೆಗಳ ಮೂಲಕ ಕಾಳಿನ ಕೊರತೆ ವಿಶೇಷವಾಗಿದೆ. ೧೯೪೨ನೇ ಇಸ್ವಿಯ ಆಯಾತದ ಅಂಕೆ ೧೫ ಲಕ್ಷ ಟನ್‌ದಿಂದ ೪೦ ಲಕ್ಷಕ್ಕೇರಿದೆ. ಹೊರಗಿನಿಂದ ಬರತಕ್ಕ ೧೫ ಲಕ್ಷ ಟನ್ ಕಾಳು ಸಕಾಲಕ್ಕೆ ಬಂದರೆ ಇಳಿಸಿದ ಸೀದಾ ಪ್ರಮಾಣದಿಂದ ಹೇಗಾದರೂ ಅಗಸ್ಟ ಕೊನೆಯ ವರೆಗೆ ಜೀವ ಹಿಡಿಯಬಹುದೆಂದು ಹಿಂದುಸ್ತಾನ ಸರಕಾರದ ಆಹಾರ ಮಂತ್ರಿಗಳಾದ ಶ್ರೀವಾಸ್ತವರು ಆಶ್ವಾಸನ ಕೊಟ್ಟಿದ್ದಾರೆ. ಈ ೧೫ ಲಕ್ಷ ಟನ್ ಧಾನ್ಯಗಳಲ್ಲಿ ೨೬೦ ಸಾವಿರ ಟನ್ ಈಗಾಗಲೆ ಹಿಂದುಸ್ತಾನದ ಮಾರ್ಗದಲ್ಲಿವೆಯಂತೆ. ಹಿಂದುಸ್ತಾನದಲ್ಲಿ ಇತ್ತೀಚೆ ಆದ ಮಳೆಯ ಮೂಲಕ ಪರಿಸ್ಥಿತಿ ಸುಧಾರಿಸಿದೆಂದು ಅಮೇರಿಕೆಯಲ್ಲಿ ಸುದ್ದಿ ಹರಡಿದ್ದು ಅತ್ಯಂತ ಘಾತಕವಾಗಿದೆಂದು ಆಹಾರ ಮಂತ್ರಿಗಳು ಅಭಿಪ್ರಾಯಪಟ್ಟಿದ್ದಾರೆ. ಹೊರಗಿನಿಂದ ಆಹಾರ ಪದಾರ್ಥ ಬರುವದು ಅತ್ಯವಶ್ಯವಾಗಿದೆ. ಹೊರಗಿನಿಂದ ಕಾಳು ಬರದಿದ್ದರೆ ಜನ ಉಪವಾಸ ಬಳಲುವ ಪ್ರಸಂಗ ಬರುವದೆಂದೂ ಅವರು ಭಯಭೀತರಾಗಿರುವರು.

ಇದೀಗ ಆಹಾರ ಪರಿಷತ್ತಿನಿಂದ ಮರಳಿದ ಸರ್ ರಾಮಸ್ವಾಮಿ ಮುದ್ಲಿಯಾರರು ಈ ಸಂಬಂಧದಲ್ಲಿ ಹೀಗೆ ಆಶ್ವಾಸನ ಕೊಟ್ಟಿದ್ದಾರೆ. ಭಾರತಕ್ಕೆ ಈ ವರ್ಷ ಸಂಯುಕ್ತ ಆಹಾರ ಮಂಡಳವು ೧೪೫೦೦೦ ಟನ್ ಅಕ್ಕಿ ಮತ್ತು ೧೪೦೦೦೦೦ ಟನ್ ಗೋದಿ ಗೋವಿನಜೋಳ ಕೊಡಲೊಪ್ಪಿದೆ.

೧೯೪೬ ನೇ ವರ್ಷಕ್ಕಾಗಿ ಭಾರತಕ್ಕೆ ೧೦ ಲಕ್ಷ ಟನ್ ಅಕ್ಕಿ ಮತ್ತು ೩೦ ಲಕ್ಷ ಟನ್ ಗೋದಿಯನ್ನು ಕೊಡಬೇಕೆಂದು ಭಾರತ ಆಹಾರ ಶಿಷ್ಟ ಮಂಡಳವು ಸಂಯುಕ್ತ ಆಹಾರ ಮಂಡಳವನ್ನು ಕೇಳಿಕೊಂಡಿತ್ತು. ಭಾರತದಲ್ಲಿ ಆಹಾರಕೊರತೆಯು ತೀವ್ರವಾಗಿರುವದರಿಂದ ಈ ವರ್ಷದ ಪೂರ್ವಾರ್ಧದಲ್ಲಿ ೫ ಲಕ್ಷ ಟನ್ ಅಕ್ಕಿಯನ್ನು ೨೦ ಲಕ್ಷ ಟನ್ ಗೋದಿ ಮತ್ತು ತಜ್ಜನ್ಯ ವಸ್ತುಗಳನ್ನು ಕಳಿಸಿಕೊಡಬೇಕೆಂದೂ ಕೇಳಿಕೊಳ್ಳಲಾಗಿತ್ತು. ಆದರೆ ಈಗ ಸಂಯುಕ್ತಮಂಡಳದವರು ೧೪೫೦೦೦ ಟನ್ ಅಕ್ಕಿ ಮತ್ತು ೧೪ ಲಕ್ಷ ಟನ್ ಗೋದಿ ಕೊಡಲು ನಿರ್ಧರಿಸಿದ್ದರಿಂದ ಭಾರತವು ಕೇಳಿದ್ದ ೨೨ ಲಕ್ಷ ಟನ್ ಧಾನ್ಯದಲ್ಲಿ ನೂರಕ್ಕೆ ನಾಲ್ವತ್ತರಷ್ಟು ಕಡಿಮೆ ಮಾಡಲಾಗಿದೆ ಎಂದಾಯಿತು. ಈಗ ಕೊಡಲಾಗಿರುವ ಧಾನ್ಯದ ಪ್ರಮಾಣವೇನೂ ಕಡಿಮೆ ಎಂದೆನಿಸುವದಿಲ್ಲ. ದಿನಾಲೂ ೧೪೦೦೦ ಟನ್ ಇಲ್ಲವೆ ತಿಂಗಳಿಗೆ ೪೦೦೦೦೦ ಟನ್‌ದಂತೆ ಈ ಧಾನ್ಯವನ್ನು ಕಳಿಸಲಾಗುವದು. ಈ ಭಾರತ ಆಹಾರ ಶಿಷ್ಟಮಂಡಳವು ವಾಶಿಂಗಟನಕ್ಕೆ ತೆರಳುವ ಮೊದಲು ಭಾರತವು ಆರು ತಿಂಗಳಿಗಾಗಿ ೪ ಲಕ್ಷ ಟನ್ ಕಾಳನ್ನು ಆಯಾತ ಮಾಡಬೇಕೆಂಬ ಕಾರ್ಯಕ್ರಮವನ್ನಿಟ್ಟುಕೊಂಡಿತ್ತು.

ಆಹಾರ ಪದಾರ್ಥಗಳು ಪರದೇಶಗಳಿಂದ ಬಂದರೂ ಅವುಗಳ ಯೋಗ್ಯ ಹಂಚಿಕೆ ಸಕಾಲದಲ್ಲಿ ಮಾಡುವದು ಅತ್ಯವಶ್ಯವಾಗಿದೆ. ಸರಿಯಾಗಿ ಸಕಾಲದಲ್ಲಿ ಹಂಚಿಕೆಯಾಗದ್ದರಿಂದ ಬಂಗಾಲದಲ್ಲಿ ಇಷ್ಟೊಂದು ಜನ ಮರಣ ಹೊಂದಿತೆಂದು ಹೇಳಲಾಗುತ್ತದೆ. ಈ ಸಂದರ್ಭದಲ್ಲಿ ಎಲ್ಲರೂ ಜಾಗ್ರತರಾಗಿರುವುದವಶ್ಯವಾಗಿದೆ. ಇದೀಗ ಆಯಾ ಪ್ರಾಂತಗಳಲ್ಲಿ ಲೋಕಪ್ರಿಯ ಮಂತ್ರಿಮಂಡಳಗಳು ಅಧಿಕಾರದಲ್ಲಿ ಬಂದದ್ದರಿಂದ ಆಶೋತ್ತರಗಳು ಹೆಚ್ಚಿವೆ. ಆದರೆ ಅವರ ಕಾರ್ಯ ಯಶಸ್ವಿಯಾಗಬೇಕಾದರೆ ಜನತೆಯ ಹಾರ್ದಿಕ ಸಹಕಾರ ಅವಶ್ಯವೆಂದು ಬೇರೆ ಹೇಳಬೇಕಾಗಿಲ್ಲ.

# ಭಾರತದಲ್ಲಿಯ ಶಿಕ್ಷಣ


ಮೂಲ ಲೇಖಕರು :
ಶ್ರೀ. ಶಾಮಪ್ರಸಾದ ಮುಕರ್ಜಿ

ಕನ್ನಡಿಸಿದವರು :
ನೆಗಳೂರು ರಂಗನಾಥ


[ ಕಳೆದ ಸಂಚಿಕೆಯಿಂದ ಮುಗಿದದ್ದು ]

ಬ್ರಿಟಿಶ ಭಾರತದಲ್ಲಿಯ ಪ್ರಾಥಮಿಕ ಶಾಲೆಗಳ ಸಂಖೆ ಸುಮಾರು ೧೮೭,೦೦೦ ಇದೆ. ಮತ್ತು ಆ ಮಟ್ಟದ ವಿದ್ಯಾರ್ಥಿಗಳ ಸಂಖೆಯು ಸುಮಾರು ೧೧,೦೦೦,೦೦೦, ಇದೆ. ಪ್ರಾಥಮಿಕ ಶಾಲೆಗಳಿಗೆ ಸೇರಲು ಯೋಗ್ಯರಾದ ಬಾಲಕರ ನಿರ್ದಿಷ್ಟ ಸಂಖೆ ತಿಳಿಯದಿದ್ದರೂ ಸುಮಾರು ೪೦, ೦೦೦, ೦೦೦, ಇದೆಯೆಂದು ಎಣಿಸಬಹುದಾಗಿದೆ ಸಾಮಾನ್ಯವಾಗಿ ಪ್ರಾಥಮಿಕ ಅಭ್ಯಾಸವು ೪-೫ ವರುಷಗಳಲ್ಲಿ ಮುಗಿವುದು. ಪ್ರಾಥಮಿಕ ಶಿಕ್ಷಣವು ಒತ್ತಾಯವಾಗಿಯೂ ಪುಕ್ಕಟೆಯಾಗಿಯೂ ಇಲ್ಲದುದರಿಂದ ಇಷ್ಟೆ ವಯಸ್ಸಿನ ಬಾಲಕರು ಶಾಲೆ ಸೇರಬೇಕೆಂಬ ನಿರ್ಬಂಧವಿಲ್ಲ. ಅದೆಲ್ಲ ಪಾಲಕರ ಆರ್ಥಿಕ ಪರಿಸ್ಥಿತಿಯನ್ನು ಮನವನ್ನೂ ಶಿಕ್ಷಣಾನುಕೂಲತೆಗಳನ್ನೂ ಅವಲಂಬಿಸಿದೆ. ಸಮೀಪದಲ್ಲಿ ಶಾಲೆಯಿದ್ದರೆ ಪಾಲಕರು ಬಾಲಕನನ್ನು ಕಳಿಸಲು ಅನುಕೂಲವಂತರಾಗಿದ್ದರೆ ಬಾಲಕರು ಶಾಲೆ ಸೇರುವರು. ಚಿಕ್ಕ ಬಾಲಕರು ದನಕಾಯುವುದರಿಂದ ತುಸು ಗಳಿಸುವುದೂ ಕುಟುಂಬದ ಆದಾಯಕ್ಕೆ ಅನುಕೂಲವುಂಟು ಮಾಡುವುದು ಎಂದು ಹೇಳುವಷ್ಟು ಭಾರತೀಯ ರೈತನ ಆರ್ಥಿಕ ಪರಿಸ್ಥಿತಿಯು ಕೀಳಾದುದೆಂದು ಹೇಳಲು ತಿಳಿಯದು. ಏಳು ಲಕ್ಷ ಹಳ್ಳಿಗಳಲ್ಲಿ ಎರಡು ಲಕ್ಷ ಹಳ್ಳಿಗಳಿಗಾದರೂ ಅಲ್ಲಿಯ ಮಕ್ಕಳಿಗೆ ಶಾಲೆಗಳವೆ ಎಂದು ಹೇಳಿಕೊಳ್ಳುವ ಪ್ರಸಂಗವೂ ಇಲ್ಲ

ಈ ಸಂದರ್ಭದಲ್ಲಿ ಇನ್ನೊಂದು ಮಹತ್ವದ ಮಾತು ಹೇಳಲೇಬೇಕು ಪ್ರಾಥಮಿಕ ವಿದ್ಯಾರ್ಥಿಗಳ ಬಹುಸಂಖ್ಯಾಕರು ಮೊದಲ ಎರಡು ತರಗತಿಗಳಲ್ಲಿಯೇ ಇದ್ದು ಇವರಲ್ಲಿಯ ತೀರ ಕೆಲವರೆ ಪ್ರಾಥಮಿಕ ಶಿಕ್ಷಣ ಪೂರ್ಣ ಪಡೆಯುವರು ಒತ್ತಾಯವಿಲ್ಲದುದರಿಂದ ಮಕ್ಕಳನ್ನು ಬೇಗ ಶಾಲೆ ಬಿಡಿಸುವುದು ಇದಕ್ಕೆ ಕಾರಣ. ಬಡತನವೂ ಒಂದು ಲೆಕ್ಕಕ್ಕೆ ಹಿಡಿಯಲೇಬೇಕಾದ ಸಂಗತಿ. ಪ್ರಾಥಮಿಕ ಶಿಕ್ಷಣವು ಪುಕ್ಕಟೆಯಾಗಿ ಸಿಕ್ಕದು ಕೊಡಬೇಕಾದ ತೆರ (Fee)ವೂ ತೀರ ಕಡಿಮೆಯಿದ್ದರೂ ಬಡಹಳ್ಳಿಗನ ಕಿಸೆಯು ಅದರ ಭಾರವನ್ನು ತಡೆಯದು ಚಿಕ್ಕಮಕ್ಕಳು ತಂದೆಗೆ ಹೊಲದಲ್ಲಿ ಮನೆಯಲ್ಲಿ ತಾಯಿಗೆ ನೆರವಾಗುವಷ್ಟು ದೊಡ್ಡವರಾದ ಕೂಡಲೆ ಶಾಲೆ ಬಿಡಿಸಲ್ಪಡುವರು. ಇದರಿಂದ ಮಾಡಿದ ಪ್ರಯತ್ನ-ಹಣದ ವೆಚ್ಚ ಪ್ರಯೋಜನಕಾರಿಯಾಗದು. ಮತ್ತು ಈ ಸಮಸ್ಯೆಯ ಯೋಗ್ಯ ಪರಿಹಾರಕ ಉಪಾಯವು ಇನ್ನು ಕಂಡು ಬಂದಿಲ್ಲ

ಎಲ್ಲಬಗೆಯ, ಮಾದರಿಯ, ಮಟ್ಟದ ಶಿಕ್ಷಣವನ್ನು ಗಣನೆಗೆ ತಂದರೆ ಇಂದು ಬ್ರಿಟಿಶ್ ಭಾರತದಲ್ಲಿ ಸುಮಾರು ೨೩೦,೫೪೬ ಶಿಕ್ಷಣ ಸಂಸ್ಥೆಗಳು ಇವೆ. ಎಲ್ಲ ತರಗತಿಯ ವಿದ್ಯಾರ್ಥಿಗಳ ಸಂಖ್ಯೆ: ಸುಮಾರು ೧೪,೫೦೦,೦೦೦. ಈ ಅಂಕೆ ಸಂಖೆಗಳಿಂದ ಇಡಿ ಜನತೆಯ ೫.೪೪ ಮಾತ್ರ ಶಿಕ್ಷಣ ಪಡೆಯುತ್ತಾರೆ ಎಂದು ತಿಳಿವುದು.

## ಶಿಕ್ಷಣದ ವೆಚ್ಚ

ಮೇಲೆ ವಿವರಿಸಿದ ಬ್ರಿಟಿಶ ಭಾರತದಲ್ಲಿಯ ಎಲ್ಲ ಮಾದರಿಯ ಶಿಕ್ಷಣ ಸಂಸ್ಥೆಗಳ ಆಡಳಿತೆಯ ವಾರ್ಷಿಕವೆಚ್ಚವು ಸುಮಾರು ೨೭೫,೦೦೦,೦೦೦ ರೂ. ಅಥವಾ ೯೩, ೨೦,೦೦೦ ಡಾಲರುಗಳು ಇವರಲ್ಲಿಯ ಕೇವಲ ನೂರಕ್ಕೆ ೪೪ ರಷ್ಟು ಮಾತ್ರ ಸರಕಾರವು ಕೊಡುವುದು ನೂರಕ್ಕೆ ೨೬ ರಷ್ಟು ತೆರ (Fee)ದ ಮೂಲಕ ಬರುವುದು. ಇನ್ನುಳಿದ ಭಾಗವೆಲ್ಲ ಕಾಣಿಕೆ, ವಂತಿಗೆ ಮುಂತಾದವುಗಳಿಂದ ತುಂಬಿ ಬರಬೇಕಾಗುವದು. ವಿದ್ಯಾಪೀಠದ ಉಚ್ಚ ಶಿಕ್ಷಣಾಲಯದ ಮಾಧ್ಯಮಿಕ ಶಾಲೆಗಳಲ್ಲಿಯ ತೆರವು ಸರಕಾರಿ ಸಹಾಯದಕಿಂತಲೂ ಹೆಚ್ಚು ಬರುವುದು. ಉಚ್ಚಶಿಕ್ಷಣದ ಭಾರವೆಲ್ಲ ಹೆಚ್ಚಾಗಿ ಸಾರ್ವಜನಿಕ ದಾನ ಕಾಣಿಕೆಗಳಿಂದ, ತೆರದಿಂದ ತುಂಬಿ ಬರುವದರಿಂದ ಸರಕಾರದ ಭಾಂಡಾರದ ಮೇಲೆ ಭಾರ ಕಡಿಮೆಯೆಂಬುದು ಕಂಡುಬರುವದು. ಆದರೂ ಬೊಕ್ಕಸದ ಮೇಲೆ ಭಾರಬಿದ್ದಿದೆ ಎಂದು ತೋರಿಸುವದು ಸೂಚಿಸುವದು ಕಂಡುಬರುವದು.

ಭಾರತೀಯ ಶಿಕ್ಷಣದ ಕೆಲ ಮೂಲಭೂತ ಸಮಸ್ಯೆಗಳನ್ನು ತಿಳಿದುಕೊಳ್ಳುವ ಸ್ಥಿತಿಯಲ್ಲಿದ್ದೇವೆ. ಈ ಸಿಂಹಾವಲೋಕನದಲ್ಲಿ ಕೆಲವುಗಳನ್ನು ಬಯಲಿಗೆಳೆದಂತಾಗಿದೆ. ಇಲ್ಲಿಯತನಕ ಹೇಳಿದುದರ ಮೇಲಿಂದ ನಮ್ಮ ಜನತೆಯ ಶಿಕ್ಷಣವು ಅತ್ಯಗತ್ಯದ ವಿಷಯವಾಗಿದೆಯೆಂದು ತೋರುವದು. ಭಾರತೀಯ ಶಿಕ್ಷಣದ ಕಟ್ಟಡಕ್ಕೆ ಗಟ್ಟಿಯಾದ ತಳಹದಿಯೆ ಇಲ್ಲ. ವಿಸ್ತೃತವಾದ ಸುಸಂಬದ್ಧವಾದ ಮಾಧ್ಯಮಿಕ ಶಿಕ್ಷಣ ಪದ್ಧತಿಯಿದ್ದು ಅದಕ್ಕನುಗುಣವಾದ ಪುಷ್ಟವಾದ ಪ್ರಾಥಮಿಕ ಶಿಕ್ಷಣದ ಪದ್ಧತಿ ಇರದಿರುವ ಜಗತ್ತಿನ ದೇಶಗಳಲ್ಲಿ ಭಾರತವೆ ಒಂದು.

ಯಾವುದೆ ಮಾದರಿಯ ಒತ್ತಾಯದ ಶಿಕ್ಷಣವೆಂದರೆ ವೆಚ್ಚದ ಮಾತು; ವೆಚ್ಚಕ್ಕಾಗಿ ಹಣವು ಮುಂದೆ ಬಾರದು. ನಾಲ್ವತ್ತು ವರ್ಷಗಳ ಹಿಂದೆ ಲಾರ್ಡ ಕರ್ಜನರು ಹೇಳಿದ ಮಾತು ಇಂದಿಗೂ ಅನ್ವಯಿಸುತ್ತದೆ. ಶಿಕ್ಷಣ ಪದ್ಧತಿಯನ್ನು ಒಳ್ಳೆಯದನ್ನಾಗಿ ಮಾಡಲಿಕ್ಕೂ ವಿಸ್ತಾರ ಮಾಡಲಿಕ್ಕೂ ಹಣಬೇಕು. ಹಿಂದಿನಂತೆ ಇಂದಿಗೂ ಹಣವಿಲ್ಲ. ಈ ಕಾರಣಗಳ ಮೂಲಕವೆ, ಪ್ರಾಂತಿಕ ಕಾನೂನು ಮಂಡಲಗಳು ಒತ್ತಾಯದ ಪ್ರಾಥಮಿಕ ಶಿಕ್ಷಣ ವಿಷಯವನ್ನು ಕಟ್ಟಳೆ ಮಾಡಿದ್ದರೂ ಕಾರ್ಯರೂಪದಲ್ಲಿ ಬಾರದಾಗಿವೆ. ಪ್ರಾಂತಿಕ ಸ್ವಾಯತ್ತತೆ ಕೊಡಲ್ಪಟ್ಟಿದ್ದರೂ ಈ ಪರಿಸ್ಥಿತಿ ಹಾಗೆಯೆ ಉಳಿದುದಕ್ಕಾಗಿ ಭಾರತದ ಹೊರಗಿನವರು ಆಶ್ಚರಿಬಡುವರು. ಸ್ವಾಯತ್ತತೆಯು ಇದ್ದರೂ ಹಣಚೀಲದ-ಹಮ್ಮಿಣಿಯದಾರ ಕೇಂದ್ರದಲ್ಲಿ ಗಟ್ಟಿಯಾಗಿ ಹಿಡಿಯಲ್ಪಟ್ಟಿವೆ ಎಂಬುದನ್ನು ಅವರು ಅರಿಯರು. ಕೇಂದ್ರದಲ್ಲಿ ಸ್ವಾಯತ್ತತೆಯಿಂದ ಹಳೆಯ ಸಾಮ್ರಾಜ್ಯವಾದಿ ಅಧಿಕಾರವೆ ಕಾರಭಾರ ನಡೆಸುತ್ತದೆ.

ಆಡಳಿತದ ಅನೇಕ ಕಾರ್ಯಗಳಿಗೆ ಬೇಕಾಗುವ ಹಣವನ್ನು ಕೇಂದ್ರದವರು ಸಲೀಸಾಗಿ ದೊರಕಿಸುವರು. ಅದು ರಾಷ್ಟ್ರೀಯ ಹಿತದ ದೃಷ್ಟಿಯಿಂದ ಇರಬೇಕೆಂದಲ್ಲ. ಆದರೆ ಶಿಕ್ಷಣದ ಮಾತೆತ್ತಿದರೆ ಹಣದ ಕೊರತೆಯ ಮಾತು ಪುಟದೇಳುವುದು. ಭಾರತದಂತಹ ದೇಶದಲ್ಲಿ ಪ್ರಾಥಮಿಕ ಶಿಕ್ಷಣಕ್ಕೆಂದು ವೆಚ್ಚ ಮಾಡುವ ಹಣವು ತೀರ-ಲಜ್ಜಾಸ್ಪದವಾಗಿದೆ. ಕಡಿಮೆ ಜನತೆಯ ಶಿಕ್ಷಣದ ಮಹತ್ವವನ್ನರಿತ ರಾಷ್ಟ್ರೀಯ ಸರಕಾರವು ಅಧಿಕಾರಕ್ಕೆ ಬರುವತನಕ ಪ್ರಾಥಮಿಕ ಶಿಕ್ಷಣದ ಪರಿಸ್ಥಿತಿ ಸುಧಾರಿಸೀತೆಂಬ ಆಸೆಯಿಲ್ಲ.

ಮಾಧ್ಯಮಿಕ ಮಟ್ಟದಲ್ಲಿಯೂ ನಮ್ಮ ಮುಖ್ಯ ಸಮಸ್ಯೆ ಆರ್ಥಿಕವಾಗಿದೆ. ಬೇರೆ ಬೇರೆ ತರದ ಬೌದ್ಧಿಕ ವೃತ್ತಿಯ ಶಿಕ್ಷಣವು ನಮ್ಮ ತರುಣರಿಗೆ ದೊರೆಯಬೇಕಾದರೆ ವ್ಯಾಪಾರ ಉದ್ಯಮಗಳಿಗೂ ಶಿಕ್ಷಣಕ್ಕೂ ನಿಕಟ ಸಂಬಂಧ ಉಂಟಾಗಬೇಕು. ಇದು ರಾಷ್ಟ್ರಕ್ಕೆ ಜೀವಾಳದ ಪ್ರಶ್ನೆಯಾಗಿದೆ. ಈ ಸಮಸ್ಯೆ ಯೋಗ್ಯ ಪರಿಹಾರವಾದರೆ ವೃತ್ತಿಯಲ್ಲಿಯ ವಿಷಮ ಹೊಂದಿಕೆಯು ದೂರವಾಗುವುದು.

## ಅಗತ್ಯದ ಬೇಡಿಕೆ

ಭಾರತೀಯ ಶಿಕ್ಷಣದ ಕಟ್ಟಡವು ಪಿರಾಮಿಡದಂತಿದ್ದು ಅದನ್ನು ತಲೆ ಕೆಳಗಾಗಿ ನಿಲ್ಲಿಸಿದಂತೆ ಇದೆ. ಇದರ ಅರ್ಥ ಇಷ್ಟು ಉಚ್ಚ ಶಿಕ್ಷಣವು ಹೆಚ್ಚಾಗಿ ಪ್ರಾಥಮಿಕ ಶಿಕ್ಷಣವು ಕಡಿಮೆಯಾಗಿದೆ ಎಂದು. ಪ್ರಾಥಮಿಕ ಶಿಕ್ಷಣವು ಕಡಿಮೆ ಪ್ರಮಾಣದಲ್ಲಿ ಎಂಬುದು ಸತ್ಯವಾದರೂ ಉಚ್ಚ ಶಿಕ್ಷಣವು ಹೆಚ್ಚಾಗಿದೆ ಎಂಬುದು ಅಷ್ಟು ಸರಿಯಲ್ಲ. ನಮ್ಮ ದೇಶಕ್ಕೆ ೧೮ ವಿದ್ಯಾಪೀಠಗಳು ಮೂರು ನೂರು ಉಚ್ಚ ಶಿಕ್ಷಣಾಲಯಗಳು ಹೆಚ್ಚೆ? ನಮ್ಮ ದೇಶಕ್ಕೆ ಅಗತ್ಯವಿರುವ ಪ್ರಮಾಣಕ್ಕಿಂತ ಹೆಚ್ಚಾಗಿದೆಯೆ ನಮ್ಮಲ್ಲಿ ಉಚ್ಚ ಶಿಕ್ಷಣ ಪಡೆದವರ ಸಂಖ್ಯೆ? ಉಚ್ಚ ಶಿಕ್ಷಣದ ವೆಚ್ಚ ಕಡಿದು ಅದನ್ನು ಪ್ರಾಥಮಿಕ ಶಿಕ್ಷಣಕ್ಕೆ ತಿರುಗಿಸಬೇಕೆಂದು ಹಲವರು ಸೂಚಿಸಿದ್ದಾರೆ. ಇದರಕಿಂತ ಕಿಡಿಗೇಡಿತನ ಬೇರೊಂದರಿಂದಲ್ಲ. ಸದ್ಯಕ್ಕಿಂತ ತೀರ ಹೆಚ್ಚು ಪ್ರಮಾಣದಲ್ಲಿ ಭಾರತಕ್ಕೆ ಪ್ರಾಥಮಿಕ ಶಿಕ್ಷಣದ ಅಗತ್ಯದಿದೆ. ರಾಷ್ಟ್ರದ ಸುಖಜೀವನಕ್ಕೆ ಮಾಧ್ಯಮಿಕ-ಉಚ್ಚ—ಶಿಕ್ಷಣವಾದರೂ ಹೆಚ್ಚು ಬೇಕು.

ಈ ಲೇಖನದಲ್ಲಿ ನಾನು ಮಹಿಳೆಯರ ಶಿಕ್ಷಣದ ಸಮಸ್ಯೆಗಳ ಬಗ್ಗೆ ಮಾತೆತ್ತಿಲ್ಲ; ಅದು ಉಳಿದ ಮಾದರಿಗಳಷ್ಟು ಮಹತ್ವದ್ದಲ್ಲವೆಂದಲ್ಲ; ಅದು ತೀರ ಜಟಿಲವಾದುದರಿಂದ ಬೇರೆಯಾಗಿ ಹೇಳಬೇಕೆಂದು ಬಿಟ್ಟಿದೆ. ನಮ್ಮ ಮಹಿಳೆಯರ ಶಿಕ್ಷಣಕ್ಕಾಗಿ ನಾವು ಸಾಕಷ್ಟು ಅನುಕೂಲತೆ ಒದಗಿಸಿಲ್ಲವೆಂಬುದು ನಮ್ಮ ರಾಷ್ಟ್ರಜೀವನದ ಒಂದು ದು:ಖದ ಸಂಗತಿ ಹೆಮ್ಮಕ್ಕಳನ್ನು ಶಾಲೆಗೆ ಕಳಿಸುವದಕ್ಕೆ ಅತಂಕವಿತ್ತು. ಒಂದು ಕಾಲದಲ್ಲಿ ಇಂದು ಆ ಬಗೆಯ ನಿರ್ಬಂಧವಿಲ್ಲ. ಹಣದ


( ೬ ನೇ ಪುಟ ನೋಡಿರಿ )





### ಆಧುನಿಕ ತತ್ವಶಾಸ್ತ್ರ ಸಮಸ್ಯೆಗಳು

ಲೇಖಕ-ಜಿ. ಹನುಮಂತರಾವ ಎಂ. ಎ.,
ಯುನಿವರ್ಸಿಟಿ ಲೈಬ್ರೇರಿಯನ್, ಮೈಸೂರು.
ಪ್ರಕಾಶಕರು ಮೈಸೂರು ವಿಶ್ವವಿದ್ಯಾನಿಲಯ
ಪುಟಗಳು XVI × ೨೯೬ ಬೆಲೆ ೧ ರೂ.

ಮೈಸೂರು ವಿಶ್ವವಿದ್ಯಾನಿಲಯದ ಅಧಿಕಾರಿಗಳು ಒಂದು ಕನ್ನಡ ಪ್ರಕಟನಸಮಿತಿಯನ್ನು ಏರ್ಪಡಿಸಿ ಕನ್ನಡ ಸಾಹಿತ್ಯವನ್ನು ಅಭಿವೃದ್ಧಿಪಡಿಸಬೇಕೆಂಬ ಘನೋದ್ದೇಶದಿಂದ ಪ್ರಸಿದ್ಧರಾದ ಗ್ರಂಥಕರ್ತರಿಂದ ನವೀನಕಾಲಕ್ಕೆ ಬೇಕಾದ ಮತ್ತು ಜನಸಾಮಾನ್ಯಕ್ಕೆ ಜ್ಞಾನವನ್ನು ಹರಡಬಲ್ಲ ಗ್ರಂಥಗಳನ್ನು ಬರೆಸುತ್ತಿರುವದು ಅಭಿನಂದನೀಯ ಹೀಗೆ ಏರ್ಪಟ್ಟಿರತಕ್ಕ ಗ್ರಂಥಮಾಲೆಯಲ್ಲಿ ಈ 'ಆಧುನಿಕ ತತ್ವಶಾಸ್ತ್ರ ಸಮಸ್ಯೆಗಳು' ಎಂಬ ಗ್ರಂಥವು ೨೧ ನೆಯದು. ತತ್ವಶಾಸ್ತ್ರವು ಅತ್ಯಂತ ಪ್ರಾಚೀನವಾದ ಶಾಸ್ತ್ರ. ವೇದ, ಉಪನಿಷತ್ತುಗಳಲ್ಲಿ ನಮ್ಮ ಪ್ರಾಚೀನ ಮಹರ್ಷಿಗಳು ಲೋಕದ ಹುಟ್ಟು ವಿಕಾಸ, ಗೊತ್ತುಗುರಿಗಳನ್ನು ಕುರಿತು ಬಹಳ ಆಲೋಚನೆ ಮಾಡಿ 'ನೇತಿ ನೇತಿ' 'ತತ್ತ್ವಮಸಿ' 'ಅಸದ್ವಾ ಇದಮಗ್ರ ಆಸೀತ್' ಎಂಬ ಮಾತುಗಳನ್ನು ಅನುಭವಗಳನ್ನು ಒಡನುಡಿದಿರುವರು. ನಮ್ಮ ಪ್ರಾಚೀನರು ಇಹಲೋಕದ ವಿಷಯಗಳನ್ನು ಮರೆತು ಪಾರಲೌಕಿಕ ವಿಚಾರಗಳ ಬಿಸಿಲ್ಗುದುರೆಯ ಬೆನ್ನುಹತ್ತಿದ್ದುದರಿಂದಲೇ ನಮ್ಮ ಐಹಿಕ ಗತಿಯು ಕೆಳಗಿಳಿಯಿತೆಂಬ ಆರೋಪವನ್ನು ಅನೇಕರು ಮಾಡುತ್ತಿರುವದುಂಟು. ಆದರೆ ಈ ಆರೋಪವು ಅಜ್ಞಾನಮೂಲಕವಾದುದೆಂಬ ವಿಷಯವನ್ನು ಅರಿತುಕೊಳ್ಳಲು ಅತಿಪಾಂಡಿತ್ಯದ ಅವಶ್ಯಕತೆಯಿಲ್ಲ. ಅಂತಹರೆಲ್ಲರೂ "ಆಧುನಿಕ ತತ್ವಶಾಸ್ತ್ರ ಸಮಸ್ಯೆಗಳು'' ಎಂಬ ಈ ಪುಸ್ತಕವನ್ನು ಓದಿದಲ್ಲಿ ಭೌತಿಕ ಐಶ್ವರ್ಯಾನುಭವದ ಅತಿರೇಕವು ಮಾನವನಲ್ಲಿ ಉಪರತಿಯನ್ನು ಹುಟ್ಟಿಸಿ ವೈರಾಗ್ಯಭಾಗ್ಯದ ಬಾಗಿಲನ್ನು ತೆರೆಯುತ್ತದೆಂಬ ಮಾತಿನ ಅನುಭವವು ಅವರಿಗೆ ಆಗದಿರದು. ಪಾಶ್ಚಿಮಾತ್ಯ ದೇಶಗಳವಾದ ಭೌತಿಕವಾದ; ಅವುಗಳ ಜೀವನ ಭೌತಿಕಜೀವನವೆಂಬ ಭ್ರಾಮಕ ಕಲ್ಪನೆಯನ್ನು ಮಾಡಿಕೊಂಡು ಆ ಅಳತೆಗೋಲಿನಿಂದ ನಮ್ಮ ಸಂಸ್ಕೃತಿಯ ಗುಣಾವಗುಣಗಳನ್ನಳೆಯಲಣಿಯಾಗುವವರನೇಕರಿರುವರು ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿಯೂ ತತ್ವಜ್ಞಾನಿಗಳೂ ದಾರ್ಶನಿಕರೂ ಲೋಕರಹಸ್ಯವನ್ನರಿಯಕೊಳ್ಳುವ ಜಿಜ್ಞಾಸೆಯಿಂದ ಬಹಳ ದುಡಿದು ದಾವತಿ ಪಟ್ಟಿದ್ದಾರೆಂಬ ಅಂಶವನ್ನು ಅವರು ಅರಿತುಕೊಂಡಲ್ಲಿ ಸುವಿಚಾರಿಯು ಹಾಗೂ ಸುಸಂಸ್ಕೃತನ ಜೀವನರೀತಿ ಪ್ರಪಂಚವೆಲ್ಲೆಲ್ಲ ಒಂದೇ ತೆರನಾಗಿರುತ್ತದೆಂಬ ಮಾತು ಮನದಟ್ಟಾಗದೆ ಉಳಿಯದು. ಲೋಕರಹಸ್ಯವನ್ನರಿಯಬೇಕೆಂಬ ಲವಲವಿಕೆ ಅದಿಬುನಾದಿಯಿಂದಲೂ ಮಾನವನ ಅಂತರಂಗವನ್ನು ತೂಗಿ ಜೀಕುತ್ತಿದೆ. ಆದರೆ ಆ ಲವಲವಿಕೆ ಇಂದಿಗೂ ಇದಮಿತ್ಥಂ ಎಂದು ಹೇಳಲು ಸಮರ್ಥವಾಗಿಲ್ಲ. ಈ ವಿಷಯದಲ್ಲಿಯ ಮಾನವನ ಹಸಿವು ಹಿಂಗದೆ ಹಾಗೇ ಉಳಿದಿದೆ. ವಿಜ್ಞಾನ ಪ್ರಪಂಚದಲ್ಲಿಯ ಹೊಸಹೊಸ ಸಂಶೋಧನೆಗಳಿಂದ ಈ ಸಮಸ್ಯೆ ಮತ್ತಷ್ಟು ದಿಗಿಯಾಗುತ್ತ ನಡೆದಿದೆ. ಈ ಬಿಕ್ಕಟ್ಟು ಒಮ್ಮೊಮ್ಮೆ ಭಕ್ತಿಮಾರ್ಗದ ಸುಲಭ ಮಾರ್ಗವನ್ನು ತೋರಿಸಿ ಕಗ್ಗಂಟನ್ನು ಬಿಡಿಸಲು ನೆರವಾಗಬಹುದೇನೋ ಎಂದು ಎನಿಸುತ್ತಿದೆ. ತತ್ವಶಾಸ್ತ್ರದ ಸಮಸ್ಯೆಗಳನ್ನು ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳು (೧) ಇರವು (೨) ಅರಿವು (೩) ನಲಿವು ಎಂದು ಮೂರು ಗುಂಪುಗಳನ್ನಾಗಿ ಮಾಡಿರುವರು. ಇದು ಯೋಗ್ಯವಾದ ವಿಭಾಗವೇ ಸರಿ. ಮಾನವನು ಭೂಮಿಯಲ್ಲಿ ಕಾಲಿಟ್ಟ ಕೂಡಲೆ ಪ್ರಕೃತಿದೇವಿಯನ್ನು ನೋಡಿ ಕುತೂಹಲದಿಂದ ಅದನ್ನರಿತುಕೊಳ್ಳಲು, ತನ್ನ ಯೋಗ್ಯತಾನುಸಾರ ತವಕಿಸುತ್ತಾನೆ. ಸಣ್ಣ ಮಕ್ಕಳು ಸಹ "ಅಲ್ಲಿ ಏನಿದೆ ? ಇಲ್ಲಿ ಏನಿದೆ?" ಎಂದು ಕುತೂಹಲದಿಂದ ಪ್ರಶ್ನೆಗಳನ್ನು ಕೇಳುವರೆಂದಬಳಿಕ ಜ್ಞಾನತೃಷ್ಣೆಯು ನಿಸರ್ಗಸಿದ್ಧವಾದ ಒಂದು ಗುಣವೆಂದು ಹೇಳಬೇಕೆ? ಮಾನವಸಹಜವಾದ ಈ ಗುಣವು ಜೀವಂತವಾಗಿರುವವರೆಗೆ ತತ್ತ್ವಚರ್ಚೆ ಚಿಂತನಗಳು ಅವ್ಯಾಹತವಾಗಿ ಸಾಗತಕ್ಕವುಗಳೇ. ಆದುದರಿಂದ ಈ ತತ್ತ್ವಶಾಸ್ತ್ರದ ಚರಿತ್ರೆಯನ್ನು ಅರಿತುಕೊಳ್ಳುವುದು ನಿಷ್ಪ್ರಯೋಜಕವಾದ ಕಾಲಹರಣವಾಗುವದಿಲ್ಲ. ಈ ದೃಷ್ಟಿಯಿಂದ ಶ್ರೀ ಹನುಮಂತರಾಯರು ಕನ್ನಡ ಸಾಹಿತ್ಯದಲ್ಲಿ ಇದುವರೆಗಿದ್ದ ಒಂದು ಕೊರತೆಯನ್ನು ತಮ್ಮ ಪುಸ್ತಕದಿಂದ ನಿವಾರಿಸಿರುವದು ಸ್ತುತ್ಯವಾಗಿದೆ ಜ್ಞಾನಮೀಮಾಂಸೆಯ ಸಮಸ್ಯೆಗಳು, ಪ್ರಕೃತಿ ಮೀಮಾಂಸೆ, ಇರವಿನ ಮೀಮಾಂಸೆ, ಮತಮೀಮಾಂಸೆ, ಧರ್ಮಮೀಮಾಂಸೆ, ಸೌಂದರ್ಯಮೀಮಾಂಸೆ, ಸಿಂಹಾವಲೋಕನವೆಂಬ ಏಳು ಭಾಗಗಳಲ್ಲಿ ಪಾಶ್ಚಿಮಾತ್ಯ ದಾರ್ಶನಿಕರ ವಿಚಾರಸರಣಿಗಳನ್ನು ಕ್ರೋಡೀಕರಿಸಿ ಸುಲಲಿತವಾದ ಶೈಲಿಯಲ್ಲಿ ಕನ್ನಡಿಗರ ತಿಳಿವಿಗೆ ಒಪ್ಪಿಸಿದ್ದಾರೆ. ಒಂದನೇ ಪರಿಶಿಷ್ಟದಲ್ಲಿ ಸುಪ್ರಸಿದ್ಧ ಪಾಶ್ಚಿಮಾತ್ಯ ತತ್ತ್ವಜ್ಞಾನಿಗಳ ಅಲ್ಪಪರಿಚಯವನ್ನು ಟಿಪ್ಪಣಿಗಳ ರೂಪದಲ್ಲಿ ಮಾಡಿಕೊಟ್ಟಿರುವದು ಪುಸ್ತಕದ ಉಪಯುಕ್ತತೆಯನ್ನು ಹೆಚ್ಚಿಸಿದೆ. ಎರಡನೆಯ ಪರಿಶಿಷ್ಟದಲ್ಲಿ ಇಂಗ್ಲೀಷಿನ ಪಾರಿಭಾಷಿಕ ಪದಗಳಿಗೆ ಪ್ರತಿಯಾಗಿ ತಾವು ಬಳಸಿದ ಕನ್ನಡ ಪಾರಿಭಾಷಿಕ ಶಬ್ದಗಳ ಪಟ್ಟಿಯೊಂದನ್ನು ಕೊಟ್ಟಿರುವದರಿಂದಂತೂ ಗ್ರಂಥದ ಪ್ರಯೋಜನಕ್ಕೆ ಹೆಚ್ಚು ಕಳೆಯುಂಟಾಗಿದೆ. ತತ್ತ್ವಶಾಸ್ತ್ರದ ಪಾರಿಭಾಷಿಕ ರವ ಶಕ್ತಿಗಳ ತಿರುಳನ್ನು ಪರಭಾಷೆಯ ಸಂಪರ್ಕವಿಲ್ಲದ ಕನ್ನಡಿಗರಿಗೆ ತಿಳಿಸುವದು ಹಗುರಾದ ಕೆಲಸವಲ್ಲ ಶ್ರೀ. ಹನುಮಂತರಾಯರು ಈ ಬಿಗಿಯಾದ ಕೆಲಸವನ್ನು ಹಗುರಾಗಿ ಮಾಡಿಕೊಳ್ಳಲು ಬಹಳ ಹೆಣಗಿರುವರು ಇಂತಹ ಅಮೌಲ್ಯವಾದ ವಿಷಯವನ್ನು ಒಳಗೊಂಡ ಮುನ್ನೂರು ಪುಟಗಳ ಹೊತ್ತಿಗೆಯ ಬೆಲೆ ಒಂದೇ ಒಂದು ರೂಪಾಯಿಯೆಂಬುದನ್ನು ನೋಡಿದರೆ ಮೈಸೂರು ವಿಶ್ವವಿದ್ಯಾನಿಲಯವು ಜ್ಞಾನಪ್ರಸಾರ ಕಾರ್ಯದಲ್ಲಿ ಪರೋಪಕಾರಬುದ್ಧಿಯಿಂದ ಮುಂದರಿಯುತ್ತಿರುವದು ಶ್ರೇಯಸ್ಕರವಿದ್ದು ಅದನ್ನು ಮನಸಾರೆ ಅಭಿನಂದಿಸದಿರಲಿಕ್ಕಾಗದು ಸುಲಭ ಬೆಲೆಗೆ ದೊರೆತ ಪುಸ್ತಕವನ್ನು ಕೊಂಡು ಓದಿ ಕನ್ನಡಿಗರು ತಮ್ಮ ತಿಳಿವಿನ ಸಿರಿಯನ್ನು ಬೆಳೆಸಿಕೊಳ್ಳಬೇಕೆಂದು ಸೂಚಿಸುತ್ತೇವೆ.

ಸಂಪಾದಕೀಯ

# ಟೀಕೆ-ಟಿಪ್ಪಣಿಗಳು

## ಬ್ರಿಟಿಶ್ ರಾಯಭಾರ

ಬ್ರಿಟಿಶ್ ರಾಯಭಾರವು ಹಿಂದುಸ್ತಾನಕ್ಕೆ ಬಂದು ಮೂರು ವಾರಗಳಾದವು. ಕಳೆದ ತಿಂಗಳ ೨೪ ನೆಯ ತಾರೀಕು ಅವರು ಹಿಂದುಸ್ತಾನದಲ್ಲಿ ಕಾಲಿಟ್ಟರು. ಈ ಮೂರು ವಾರಗಳಲ್ಲಿ ಮಂತ್ರಿತ್ರಯರು ಹಿಂದುಸ್ತಾನದಲ್ಲಿಯ ಪಕ್ಷಪ್ರಮುಖರನ್ನು ಭೆಟ್ಟಿಯಾಗಿ ಅವರ ಅಭಿಪ್ರಾಯಗಳನ್ನು ತಿಳಿದುಕೊಂಡರು. ನರೇಂದ್ರ ಪ್ರಮುಖರನ್ನು ಕರೆಯಿಸಿ ಅವರ ಭವಿತವ್ಯದ ಬಗೆಗೂ ಚರ್ಚಿಸಿದವರು. ಕಾಂಗ್ರೆಸ್ ಲೀಗ ಈ ಎರಡೂ ಮುಖ್ಯ ಪಕ್ಷಗಳ ಪ್ರಮುಖರೊಡನೆ ದೀರ್ಘ ಚರ್ಚೆ ನಡೆಸಿರುವರು. ಈ ವಿಚಾರ ವಿನಿಮಯದಿಂದ ಹೊರಬಿದ್ದ ಕೆಲ ಅಂಶಗಳನ್ನು ಇದೇ ಸಂಚಿಕೆಯಲ್ಲಿ ಬೇರೆಡೆ ಕೊಟ್ಟಿದ್ದೇವೆ. ಈಗ ಚರ್ಚೆಯ ಮೊದಲನೆಯ ಅಂಕು ಮುಗಿದಿದ್ದು ಇದೇ ೨೪ ನೇ ತಾರೀಕಿನಿಂದ ಎರಡನೆ ಅಂಕು ಪ್ರಾರಂಭವಾಗುವದೆಂದು ತೋರುತ್ತದೆ. ಮುಸ್ಲಿಂಲೀಗನ್ನು ಬಿಟ್ಟು ಲೀಗೇತರ ಸಂಘಸಂಸ್ಥೆಗಳು ಪಾಕಿಸ್ತಾನವನ್ನು ತೀವ್ರವಾಗಿ ವಿರೋಧಿಸಿರುತ್ತವೆ. ಲೀಗೇತರ ಸಂಸ್ಥೆಗಳಲ್ಲಿನ ಪ್ರಮುಖರೂ ಯಾವ ಪಕ್ಷಕ್ಕೂ ಸೇರದಿದ್ದ ಸರ್ ತೇಜಬಹಾದ್ದೂರರಂಥವರೂ ಪಾಕಿಸ್ತಾನವನ್ನು ವಿರೋಧಿಸಿರುವರು. ಸಿಂಧದಲ್ಲಿ ಲೀಗದ ಪ್ರಮುಖರಾಗಿದ್ದು ಇದೀಗ ಸಿಂಧ ಶಾಸನ ಸಭೆಯ ಸಮ್ಮಿಶ್ರ ಪಕ್ಷದ ಧುರೀಣರಾದ ಜಿ. ಎಂ. ಸಯ್ಯದರೂ ಜಿನ್ನಾ ಸಾಹೇಬರು ಹೇಳುತ್ತಿರುವ ಪಾಕಿಸ್ತಾನವನ್ನು ವಿರೋಧಿಸಿ ಹಿಂದೀ ಸಮಸ್ಯೆ ಬಿಡಿಸಲು ಬ್ರಿಟಿಶರು ಮೊದಲು ಅಧಿಕಾರ ಬಿಟ್ಟುಕೊಡಬೇಕೆಂದು ಪ್ರತಿಪಾದಿಸಿರುವರು. ನರೇಂದ್ರರೂ ಹಿಂದುಸ್ತಾನದ ಅಖಂಡತ್ವವನ್ನು ಪ್ರತಿಪಾದಿಸಿ ತಾತ್ಪೂರ್ತಿಕ ಸರಕಾರ ಸ್ಥಾಪಿಸಲು ಕೇಳಿಕೊಂಡಿದ್ದಾರೆ. ಆದರೆ ಲೀಗ ಧುರೀಣರಾದ ಬ್ಯಾ. ಜಿನ್ನಾರವರು ಪಾಕಿಸ್ತಾನದ ಹೊರತು ಬೇರೆ ಮಾತನಾಡಬೇಡಿರೆಂದು ಸ್ಪಷ್ಟವಾಗಿ ಹೇಳಿದ್ದಾರೆ. ಲೀಗ ಶಾಸನ ಸಭಾಸಮ್ಮೇಲನದಲ್ಲಿಯೂ ಇದೇ ಬಗೆಯ ಗೊತ್ತುವಳಿಯಾಗಿದೆ. ಇದನ್ನು ನೋಡಿದರೆ ಕಾಂಗ್ರೆಸ ಮತ್ತು ಲೀಗಗಳಲ್ಲಿ ಒಪ್ಪಂದವಾಗುವದು ಅಶಕ್ಯವೆನಿಸುತ್ತದೆ. ಮಂತ್ರಿಶಿಷ್ಟರು ಅಳ್ಳೆದೆಯವರಾಗಿರದಿದ್ದರೆ ಮಾತ್ರ ಈ ಬಗೆಯ ಬಿಕ್ಕಟ್ಟನ್ನು ಬಗೆಹರಿಸಬಲ್ಲರು. ಇಲ್ಲದಿದ್ದರೆ ಹಿಂದಿನಂತೆ ಈ ರಾಯಭಾರವೂ ಅಯಶಸ್ವಿಯಾಗುವಲ್ಲಿ ಸಂದೇಹವಿಲ್ಲ.

## ಒಡಂಬಡಿಕೆ ಪ್ರಯತ್ನ

ಹಿಂದುಸ್ತಾನದಲ್ಲಿಯ ಈ ಎರಡು ಪ್ರಮುಖ ಪಕ್ಷಗಳಲ್ಲಿ ಒಡಂಬಡಿಕೆಯೆಂತು ಮಾಡಬಹುದೆಂಬುದು ಈಗ ಮಹತ್ವದ ಸಮಸ್ಯೆಯಾಗಿದೆ. ಮಂತ್ರಿಶಿಷ್ಟಮಂಡಳದವರು ಲೀಗ ಮತ್ತು ಕಾಂಗ್ರೆಸ್ ಪ್ರಮುಖರ ಸಂಯುಕ್ತ ಸಭೆ ಸೇರಿಸಿ ವಿಚಾರ ವಿನಿಮಯ ಮಾಡಲಾಗುವದೆಂದು ತಿಳಿಯುತ್ತದೆ. ಗಾಂಧೀಜಿಯವರಂತೂ ಪಾಕಿಸ್ತಾನಕ್ಕೊಪ್ಪುವುದೆಂದರೆ ಮಹಾ ಪಾಪ ಮಾಡಿದಂತೆ ಎಂಬದಾಗಿ ಸ್ಪಷ್ಟವಾಗಿ ಹೇಳಿದ್ದಾರೆ. ಆದರೆ ಈ ಪ್ರಶ್ನೆಯಲ್ಲಿ ಕಾಂಗ್ರೆಸ ಲೀಗ ಸಂಸ್ಥೆಗಳಲ್ಲಿ ಒಡಂಬಡಿಕೆಯಾಗದಿದ್ದರೆ ಅಂತರ್‌ರಾಷ್ಟ್ರೀಯ ನ್ಯಾಯಮಂಡಳಕ್ಕೆ ಇದರ ನಿರ್ಣಯಾಧಿಕಾರ ಕೊಡಬಹುದೆಂದು ಅವರು ಸೂಚಿಸಿರುವರು. ತಾತ್ಪೂರ್ತಿಕ ಕೇಂದ್ರ ಸರಕಾರವನ್ನು ಕೂಡಲೆ ಸ್ಥಾಪಿಸಬೇಕೆಂಬುದು ಲೀಗೇತರ ಎಲ್ಲ ಪಕ್ಷಪ್ರಮುಖರ ಅಭಿಪ್ರಾಯವಿರುವದು. ಬ್ಯಾ. ಜಿನ್ನಾರವರನ್ನೇ ಮುಖ್ಯಮಂತ್ರಿಗಳನ್ನಾಗಿ ನೇಮಿಸಬಹುದೆಂದೂ ಹೇಳಲಾಗುತ್ತದೆ. ಮಹಾತ್ಮಾ ಗಾಂಧಿಯವರು ಜಿನ್ನಾರವರೊಡನೆ ಹಿಂದೆ ನಡೆಸಿದ ಮಾತುಕತೆಗಳಲ್ಲಿ ೧೯೪೪ರಲ್ಲಿ ಬರೆದ ಪತ್ರ ಮತ್ತು ೧೯೪೫ ನೇ ಸಪ್ಟಂಬರದಲ್ಲಿ ಕಾಂಗ್ರೆಸ ವರ್ಕಿಂಗ ಕಮೀಟಿಯವರು ಪಾಸು ಮಾಡಿದ ಗೊತ್ತುವಳಿ ಇವೆರಡೂ ಲಿಖಿತಗಳನ್ನು ಮಂತ್ರಿಮಂಡಳದವರು ಪರಿಶೀಲಿಸುತ್ತಿರುವರೆಂದು ತಿಳಿಯುತ್ತದೆ. ಗಾಂಧೀಜಿಯವರ ಪತ್ರದಲ್ಲಿ ಜಿನ್ನಾರವರು ಸಂರಕ್ಷಣ, ಪರರಾಷ್ಟ್ರ ಧೋರಣ, ಹಣಕಾಸು, ಮಾರ್ಗಸೌಕರ್ಯ ಜಕಾತಿ ಮೊದಲಾದವುಗಳ ಬಗ್ಗೆ ಸಾಮಾನ್ಯ ಕೇಂದ್ರಕ್ಕೆ ಒಪ್ಪಿದಲ್ಲಿ, ಒಂದು ಬಗೆಯ ಪಾಕಿಸ್ತಾನ ಕೊಡಮಾಡಿದ್ದಾರಂತೆ. ಯಾವದೇ ವಿಶಿಷ್ಟ ಭಾಗದವರು ಪ್ರಚಂಡ ಬಹುಮತದಿಂದ ಹಿಂದೀ ಸಂಯುಕ್ತ ಸಂಘದಿಂದ ಹೊರಗುಳಿಯಲು ಬಯಸಿದಲ್ಲಿ ಕಾಂಗ್ರೆಸ್ಸು ಸಂಯುಕ್ತ ಸಂಘದಲ್ಲಿ ಸೇರಲು ಅವರನ್ನು ಒತ್ತಾಯಪಡಿಸುವದಿಲ್ಲ ಎಂದು ಸಪ್ಟೆಂಬರ ೧೯೪೫ರಲ್ಲಿ ನಿರ್ಣಯ ಸ್ವೀಕರಿಸಿತ್ತು. ಇವೆರಡು ಲಿಖಿತಗಳನ್ನು ಪಂಡಿತ ಜವಾಹರಲಾಲರ ಇತ್ತೀಚಿನ ಹೇಳಿಕೆಗಳನ್ನು ತಳಹದಿಯಾಗಿಟ್ಟುಕೊಂಡು ಮಂತ್ರಿತ್ರಯರು ಕಾಂಗ್ರೆಸ ಮತ್ತು ಲೀಗಗಳಲ್ಲಿ ಒಡಂಬಡಿಕೆಯ ಪ್ರಯತ್ನ ಮಾಡುವರೆಂದು ತಿಳಿಯುತ್ತದೆ. ಬ್ರಿಟಿಶ್ ಸರಕಾರದವರು ಅಧಿಕಾರವನ್ನು ಬಿಟ್ಟುಗೊಟ್ಟರೆ ಹಿಂದೀಯರು ಹಿಂದುಸ್ತಾನ ಮತ್ತು ಪಾಕಿಸ್ತಾನ ಪ್ರಶ್ನೆಯನ್ನು ತಮ್ಮಲ್ಲಿಯೇ ಬಗೆಹರಿಸಿಕೊಳ್ಳುವರೆಂದೂ ಅದು ಶಕ್ಯವಾಗದಿದ್ದರೆ ಅಂತರ್‌ರಾಷ್ಟ್ರೀಯ ನ್ಯಾಯ ಮಂಡಳಕ್ಕೆ ಅದನ್ನು ಒಪ್ಪಿಸಬಹುದೆಂದೂ ಮಾಡಲ್ಪಟ್ಟ ಸೂಚನೆ ಮಹತ್ವದ್ದಾಗಿದೆ. ಯಾವುದೊಂದು ಪ್ರಶ್ನೆಯಲ್ಲಿ ಮತಭೇದವಾದರೆ ನಿಷ್ಪಕ್ಷಪಾತ ನ್ಯಾಯ ಮಂಡಳಕ್ಕೊಪ್ಪಿಸುವದು ಶಿಷ್ಟಸಮ್ಮತ ಮಾರ್ಗವು. ಅದನ್ನು ಬಿಟ್ಟುಗೊಟ್ಟು ಕೇವಲ ಹಟಮಾರಿತನದ ಧೋರಣ ವಹಿಸುವದು ಎಷ್ಟೇ ಬಲಿಷ್ಠ ಸರ್ವಾಧಿಕಾರಿಗೂ ಶೋಭಿಸದು. ಅದರಿಂದ ಉದ್ದಿಷ್ಟವು ಎಂದಿಗೂ ಸಾಧಿಸಲಾರದು. ಈ ಮಾತನ್ನು ಜಿನ್ನಾ ಪ್ರಭೃತಿಗಳು ಬೇಗ ತಿಳಿದಷ್ಟು ವಿಹಿತ.

## ಘಾತಕ ಧೋರಣ

ಮುಸ್ಲಿಂ ಲೀಗಿನ ಇತ್ತೀಚಿನ ಧೋರಣವನ್ನು ನೋಡಿದರೆ ಹಿಂದುಸ್ತಾನದಲ್ಲಿ ಯಾದವೀ ಕಲಹವನ್ನು ನಡೆಸಬೇಕೆಂಬ ಸಿದ್ಧತೆ ಅವರು ನಡೆಸಿರುವರೆಂಬುದು ಸ್ಪಷ್ಟವಾಗುವುದು. ಜಿನ್ನಾರವರ ಭಾಷಣ ಲೀಗಿನವರು ಹೊರಸಿರುವರೆಂದು ಹೇಳಲಾಗುತಿರುವ ಗುಪ್ತ ಪರಿಪತ್ರದಲ್ಲಿಯ ಒಕ್ಕಣಿಕೆಯನ್ನು ನೋಡಿದರೆ ಈ ಮಾತು ಸ್ಪಷ್ಟವಾಗುವುದು. ಶಾಸನ ಸಭೆಗಳಿಗೆ ಲೀಗ ಪರವಾಗಿ ಆರಿಸಿ ಹೋದ ಸದಸ್ಯರು ಸೇರಿದ ಸಮ್ಮೇಲನದಲ್ಲಿಯ ಭಾಷಣ ನಿರ್ಧಾರಗಳೂ ಇದಕ್ಕೆ ಪುಷ್ಟಿ ಕೊಡುತ್ತವೆ. ಪಾಕಿಸ್ತಾನವಿಲ್ಲದೆ ಬೇರೆ ಯಾವದನ್ನೂ ವಿಚಾರ ಮಾಡುವುದಿಲ್ಲೆಂದು ಸ್ಪಷ್ಟವಾಗಿ ಘೋಷಿಸಲಾಗಿದೆ ಅಲ್ಲದೆ ಒತ್ತಾಯದಿಂದ ಅಖಂಡ ಹಿಂದುಸ್ತಾನವನ್ನು ತಮ್ಮ ಮೇಲೆ ಹೇರಿದ್ದಾದರೆ ಕತ್ತಿಯನ್ನು ಒರೆಯಿಂದ ಹಿರಿದಾದರೂ ಅದಕ್ಕೆ ತಡೆಹಾಕುವವಾಗಿ ಲೀಗ ಮುಖಂಡರು ಘೋಷಿಸಿದ್ದಾರೆ. ೮೦೦ ವರುಷಗಳ ವರೆಗೆ ಯಾರ ಮೇಲೆ ಪ್ರಭುತ್ವ ನಡೆಸಿದ್ದೆವೊ ಅಂಥ ಹಿಂದುಗಳ ಪ್ರಭುತ್ವದಲ್ಲಿ ತಾವೆಂದಿಗೂ ಉಳಿಯಲಾರೆವೆಂದು ಅವರು ಅರ್ಭಟಿಸಿದ್ದಾರೆ. ಲೀಗಿನವರ ಗುಪ್ತ ಪರಿಪತ್ರವೆಂದು ಹೇಳಲ್ಪಡುತ್ತಿರುವ ಕಾಗದದಲ್ಲಿಯ ಸೂಚನೆಗಳಂತೂ ಅತ್ಯಂತ ಘಾತಕವಾಗಿವೆ. ಆ ಸೂಚನೆಗಳು ಕಾರ್ಯರೂಪದಲ್ಲಿ ಬಂದರೆ ಹಿಂದುಸ್ತಾನದಲ್ಲಿ ಎಲ್ಲಿಯೂ ಶಾಂತಿ ಸೌಹಾರ್ದಗಳು ಉಳಿಯಲಾರವು. ಈಗಾಗಲೆ ಯುದ್ಧ ಬರಗಾಲ, ಅಹಾರಾಭಾವ ಮೊದಲಾದವುಗಳಿಂದ ಬೆಂಡಾದ ಭಾರತೀಯರು ಮತ್ತೆ ಇಂಥ ಅನರ್ಥಕ್ಕೊಳಗಾದರೆ ಪರಿಸ್ಥಿತಿ ಭಯಾನಕವಾಗಬಹುದು. ಇಂಥ ಪಾಶವೀ ಶಕ್ತಿಯಿಂದ ಲೀಗಿನವರಿಗೆ ಪಾಕಿಸ್ತಾನವೆಂದಿಗೂ ದೊರೆಯದು. ಸಿಂಧದ ಮುಸಲ್ಮಾನ ಪ್ರಮುಖರಾದ ಸಯ್ಯದರು ಹೇಳಿದಂತೆ ಹಿಂದುಗಳ ಸಮ್ಮತಿಯಿಂದಲೆ ಮುಸಲ್ಮಾನರು ಪಾಕಿಸ್ತಾನ ಪಡೆಯಬಹದೆಂಬುದು ಸೂಕ್ತ ಮಾತಾಗಿದೆ. ಅವರು ಹೇಳಿದಂತೆ ಕೇಂದ್ರ ಸರಕಾರಕ್ಕಾಧೀನವಾಗಿ ಆಯಾ ಪ್ರಾಂತಗಳು ಒಂದು ಬಗೆಯ ಸ್ವಾಯತ್ತತೆಯನ್ನು ಪಡೆಯಬಹುದು. ಮುಸ್ಲಿಂ ಲೀಗಿನವರು ಹಿಂದಿನ ಸುಲ್ತಾನಶಾಹಿಯ ಮೋಹವನ್ನು ಬಿಟ್ಟುಗೊಟ್ಟು ೨೦ನೇ ಶತಮಾನದಲ್ಲಿಯ ಪ್ರಜಾಪ್ರಭುತ್ವ ತತ್ವಕ್ಕನುಸಾರವಾಗಿ ಸದ್ಯದ ಸಮಸ್ಯೆ ಬಿಡಿಸಲಣಿಯಾಗಬೇಕು ಅಂದರೇನೆ ಅವರಿಗೂ ಹಿತ ದೇಶಕ್ಕೂ ಹಿತವಾಗುವದರಲ್ಲಿ ಸಂದೇಹವಿಲ್ಲ.

## ಮಹಾತ್ಮರ ಯಶಸ್ವೀ ಪ್ರಯತ್ನ

ಮಹಾತ್ಮಾ ಗಾಂಧೀಯವರು ರಾಜಕೀಯ ಕೈದಿಗಳ ಬಿಡುಗಡೆಯ ಸಂಬಂಧದಲ್ಲಿ ವಾಯಿಸರಾಯ ಲಾರ್ಡ ವೇವೆಲ್ಲರನ್ನು ಮತ್ತು ಸರ್ ಸೇನಾಪತಿ ಅಚಿನ್‌ಲೆಕ್ಕರನ್ನು ಭೆಟ್ಟಿಯಾದರಷ್ಟೆ ಈ ಪ್ರಶ್ನೆಯ ವಿಚಾರ ಮಾಡಿ ತಿಳಿಸುವುದಾಗಿ ಮಹಾತ್ಮರಿಗೆ ಆಶ್ವಾಸನ ಕೊಡಲಾಗಿತ್ತು. ತದನುಸಾರ ಪ್ರಮುಖ ರಾಜಕೀಯ ಕೈದಿಗಳಾದ ಜಯಪ್ರಕಾಶ ನಾರಾಯಣ ಮತ್ತು ಡಾ. ರಾಮ ಮನೋಹರ ಲೋಹಿಯಾ ಇವರ ಬಿಡುಗಡೆಯ ಹುಕುಮು ಹೊರಟವೆಂದೂ ಹೇಳಲಾಗುತ್ತದೆ. ಇದರಿಂದ ಹಿಂದುಸ್ತಾನ ಸರಕಾರದವರು ಸಮಂಜಸ ಧೋರಣ ವಹಿಸುವ ಮನೋವೃತ್ತಿ ತಾಳಿರುವರೆಂದು ಊಹಿಸಲಾಗುತ್ತದೆ. ಸರಕಾರದ ಹೃದಯ ಪರಿವರ್ತನೆ ನಿಜವಾಗಿ ಆಗಿರುವದೋ ಇಲ್ಲವೊ ಎಂಬುದು ಇದೊಂದು ಘಟನೆಯಿಂದ ಸ್ಪಷ್ಟವಾಗದಿದ್ದರೂ ವಿಚಾರಣೆಯಿಲ್ಲದೆ ಸ್ಥಾನಬದ್ಧತೆಯಲ್ಲಿ ಕೊಳೆಯುತ್ತಿದ್ದ ಇಬ್ಬರು ಪ್ರಮುಖರ ಬಿಡುಗಡೆಯಾದುದು ಸಂತೋಷದ ಸಂಗತಿಯಾಗಿದೆ. ಉಪ್ಪಿನ ಕರವನ್ನು ರದ್ದುಪಡಿಸಬೇಕೆಂಬುದು ಮಹಾತ್ಮಾ ಗಾಂಧಿಯವರ ಎರಡನೆಯ ಬೇಡಿಕೆಯಿದೆ. ಉಪ್ಪಿನ ಕರದಿಂದ ೭–೮ ಕೋಟಿ ರೂಪಾಯಿ ಉತ್ಪನ್ನ ಬರುವದರಿಂದ ಅದನ್ನೆಂತು ಕಳೆದುಕೊಳ್ಳಬೇಕೆಂದು ಸರಕಾರದವರು ಈ ಕರ ರದ್ದುಪಡಿಸುವದನ್ನು ಅಲಕ್ಷಿಸುತ್ತ ನಡೆದಿರುವರು. ಆದರೆ ಯಾವ ಬಗೆಯಿಂದಲೂ ನ್ಯಾಯ್ಯವಲ್ಲದ ಕರ ಹಾಕುವದಕ್ಕಿಂತ ಅಷ್ಟು ಹಣ ಬೇರೆ ಮಾರ್ಗದಿಂದ ಎತ್ತುವದು ಇಲ್ಲವೆ ವೆಚ್ಚವನ್ನು ಕಡಿಮೆ ಮಾಡುವದು ಜಾಣತನದ ಸಂಗತಿ. ಗಾಂಧೀಜಿಯವರು ಉಪ್ಪಿನ ಕರ ರದ್ದುಪಡಿಸಲು ಎಷ್ಟೊಂದು ಆಗ್ರಹ ತಳೆದಿರುವರೆಂಬುದು ಸರ್ವಶ್ರುತ. ಕೇಂದ್ರ ಸರಕಾರದವರು ಇನ್ನಾದರೂ ಆ ಕರವನ್ನು ಕಿತ್ತಿಹಾಕಿ ಜನತೆಗೆ ನ್ಯಾಯವನ್ನು ದಯಪಾಲಿಸಿದ ಶ್ರೇಯಸ್ಸು ಪಡೆಯಬೇಕೆಂದು ಸೂಚಿಸಬಯಸುತ್ತೇವೆ.

## ಕಲಕತ್ತೆಯಲ್ಲಿ ಮತ್ತೆ ದುಃಸ್ಥಿತಿ

ಕಲಕತ್ತೆಯಲ್ಲಿ ಮತ್ತೆ ನಿರಾಶ್ರಿತರ ಸಂಖೆ ಹೆಚ್ಚುತಿದೆಂದು ವರದಿ ಬರಹತ್ತಿವೆ. ಕೇಂದ್ರ ಸರಕಾರವೂ ಈ ಮಾತನ್ನು ಶಾಸನ ಸಭೆಯಲ್ಲಿ ಒಪ್ಪಬೇಕಾಯಿತು. ಹೊರಗಿನಿಂದ ಬರುವವರ ಸಂಖೆ ಹೆಚ್ಚಿ ಕಲಕತ್ತೆಯಲ್ಲಿ ಉಪವಾಸ ಬಳಲುವವರು ಹೆಚ್ಚುತಿರುವರೆಂದು ತಿಳಿಯುತ್ತದೆ. ನಗರಕ್ಕೆ ನಿರಾಶ್ರಿತರು ಹೊಟ್ಟೆ ತುಂಬಿಕೊಳ್ಳಲು ಬರುತಿರುವರೆಂಬುದು ಸುಸ್ಪಷ್ಟ. ಅಲ್ಲಲ್ಲಿಯ ನಿರಾಶ್ರಿತರಿಗೆ ಹೊಟ್ಟೆತುಂಬ ಆಹಾರ ಪದಾರ್ಥಗಳು ಸಿಕ್ಕುವ ಏರ್ಪಾಡು ಮಾಡಿದ್ದಾದರೆ ಈ ಜನ ನಗರಕ್ಕೆ ಬರುವುದನ್ನೆ ಬಿಟ್ಟುಗೊಡುವರು. ೧೯೪೩ ರಲ್ಲಿ ಬಂಗಾಲದಲ್ಲಿ ಆದ ಅನರ್ಥವು ಎಲ್ಲರ ಸ್ಮರಣೆಯಲ್ಲಿರಲು ಸಾಕು. ಸರಕಾರದವರ ಅಲಕ್ಷದಿಂದಲೆ ಲಕ್ಷಗಟ್ಟಲೆ ಜನ ಮೃತ್ಯುದೇವತೆಗೆ ಬಲಿಯಾಗಬೇಕಾಯಿತೆಂದು ಎಲ್ಲರೂ ಒಪ್ಪುತಿರುವರು. ಈಸಲವಾದರೂ ಹಾಗಾಗದಂತೆ ನೋಡಿಕೊಳ್ಳುವುದು ಸರಕಾರದ ಕರ್ತವ್ಯವಾಗಿದೆ. ಇಂದು ಕಲಕತ್ತೆಯಲ್ಲಿದ್ದ ನಿರಾಶ್ರಿತರ ದುಃಸ್ಥಿತಿ ನಾಳೆ ಬಂಗಾಲದ ಇತರ ಭಾಗಗಳಲ್ಲಿಯೂ ವ್ಯಾಪಿಸಬಹುದು. ಆದುದರಿಂದ ಮೊದಲೆ ಎಚ್ಚರಪಡುವುದು ಜಾಣತನದ ಮಾತು. ಶ್ರೀ ಸನ್ಯಾಲರು ಕೇಂದ್ರ ಶಾಸನ ಸಭೆಯಲ್ಲಿ ಈ ಸಂಬಂಧದಲ್ಲಿ ಮಂಡಿಸಿದ್ದ ನಿಲುವಳಿ ಸೂಚನೆಯ ಬಗ್ಗೆ ಮಾತಾಡುವಾಗ ಇಂದಿನ ಬರಗಾಲ ಪರಿಸ್ಥಿತಿ ೧೯೪೩ಕ್ಕಿಂತ ಭೀಕರವಾಗಿದೆಂದು ಹೇಳಿದರು. ಲೀಗದ ಸಿದ್ದೀಕಿಯವರು ಈ ಆರೋಪ ಅಲ್ಲಗಳೆದು ಇದಕ್ಕೆ ಪಕ್ಷದ ಬಣ್ಣ ಬಳೆಯಲು ಪ್ರಯತ್ನಿಸಿದ್ದು ಸರ್ವಥೈವ ನಿಷೇಧಾರ್ಹ ಸಂಗತಿಯಾಗಿದೆ. ಕಾಂಗ್ರೆಸ ಪಕ್ಷದ ಧುರೀಣರಾದ ಶರಚ್ಚಂದ್ರ ಬೋಸರು ಸಿದ್ದೀಕಿಯವರಿಗೆ ಯೋಗ್ಯ ಉತ್ತರ ಕೊಟ್ಟು ಬಲಿಷ್ಠ ಕೇಂದ್ರ ಸರಕಾರವು ಹೊಣೆಗಾರಿಕೆಯಿಂದ ಪರಿಸ್ಥಿತಿಯನ್ನು ಸರಿಪಡಿಸಿಕೊಳ್ಳಬೇಕೆಂದು ಪ್ರತಿಪಾದಿಸಿದರು. ಸಿದ್ದೀಕಿಯವರು ಹೇಳಿದಂತೆ ಆಹಾರ ಪ್ರಶ್ನೆ ಕೇವಲ ಪ್ರಾಂತಿಕವಾಗಿರದೆ ಕೇಂದ್ರ ಮತ್ತು ಪ್ರಾಂತಿಕ ಸರಕಾರಗಳೆರಡಕ್ಕೂ ಸಂಬಂಧಿಸಿದ್ದೆಂಬುದು ನಿರ್ವಿವಾದ. ಕೇಂದ್ರ ಸರಕಾರದ ಸಹಾಯ ಸಹಕಾರಗಳಿಲ್ಲದೆ ಪ್ರಾಂತಿಕ ಸರಕಾರಗಳು ಈ ಮಹತ್ವದ ಪ್ರಶ್ನೆಯನ್ನು ಸಮಾಧಾನಕರವಾಗಿ ಬಿಡಿಸಲಾರವು. ಆದುದರಿಂದ ಬಂಗಾಲ ಪ್ರಾಂತಿಕ ಸರಕಾರದವರು ಈ ಆಹಾರ ಪ್ರಶ್ನೆಯನ್ನು ಪಕ್ಷಾತೀತವೆಂದು ಪರಿಗಣಿಸಿ ಎಲ್ಲರಿಗೂ ಆಹಾರ ಸಿಕ್ಕುವಂತೆ ನೋಡಿಕೊಳ್ಳಬೇಕು. ಅಲ್ಲಲ್ಲಿ ಬಟ್ಟೆಯ ಕೊರತೆಯೂ ಕೇಳಬರುತ್ತದೆ. ಆ ಬಗ್ಗೆಯೂ ಸರಕಾರದವರು ವಿಚಾರ ಮಾಡಿ ಪರಿಹಾರ ಕೊಡುವದು ಅತ್ಯವಶ್ಯವಾಗಿದೆಂದು ಬೇರೆ ಹೇಳಬೇಕಿಲ್ಲ.

## ರಾಷ್ಟ್ರಸಂಘದ ಸಮಾಧಿ

ಜಗತ್ತಿನಲ್ಲಿ ಯುದ್ಧಭಯವನ್ನು ತಪ್ಪಿಸಿ ಎಲ್ಲೆಲ್ಲಿಯೂ ಸುಖ ಶಾಂತಿ ಸಮೃದ್ಧಿಗಳು ನೆಲಸುವಂತೆ ಮಾಡಲು ಮೊದಲನೇ ಮಹಾಯುದ್ಧಾನಂತರ ರಾಷ್ಟ್ರಸಂಘದ ಸ್ಥಾಪನೆಯಾಗಿತ್ತು. ಇದರ ಸಂಸ್ಥಾಪಕರಾದ ವುಡ್ರೊ ವಿಲ್ಸನ್‌ರ ೧೪ ಮುದ್ದೆಗಳು ಅತ್ಯಂತ ಮಹತ್ವದ್ದಾಗಿದ್ದವು. ಆಗ ಅವುಗಳನ್ನೆಲ್ಲರೂ ಪ್ರಶಂಸಿಸಿದರು. ಆದರೆ ಪ್ರಮುಖ ಸದಸ್ಯ ರಾಷ್ಟ್ರಗಳೇ ಆ ತತ್ವಗಳಂತೆ ನಡೆಯಲು ಸಿದ್ಧವಾಗದ್ದರಿಂದ ರಾಷ್ಟ್ರಸಂಘ ಕುಸಿದು ಬಿದ್ದು ಎರಡನೇ ಮಹಾಯುದ್ಧದಂಥ ಭೀಕರ ಯುದ್ಧ ನಡೆಯಿತು. ಮೊದಲಿನ ಹತ್ತು ವರ್ಷ ಹೇಗೊ ರಾಷ್ಟ್ರಸಂಘದ ತತ್ವಗಳು ಪಾಲಿಸಲ್ಪಟ್ಟವು. ಆದರೆ ಮುಂದೆ ಒಂದೊಂದೆ ಕರಾರ ಮುರಿಯಲ್ಪಟ್ಟು ಕೊನೆಗೆ ಅದರ ಸಮಾಧಿ ಕಟ್ಟುವ ದುರ್ಧರ ಪ್ರಸಂಗ ಇಂದು ಬಂದಿತು. ರಾಷ್ಟ್ರಸಂಘದ ಸ್ಥಾಪನೆಯ ನಂತರದ ಈ ೨೫ ವರ್ಷಗಳಲ್ಲಿ ಜಗತ್ತು ಮೊದಲಿಗಿಂತ ಹೆಚ್ಚು ದುಃಸ್ಥಿತಿಗೀಡಾಗಿದೆ ಇದಕ್ಕೆ ಮುಖ್ಯ ಕಾರಣವೆಂದರೆ ಮೇಲೆ ಹೇಳಿದಂತೆ ಪ್ರಮುಖ ಸದಸ್ಯ ರಾಷ್ಟ್ರಗಳು ತಾವೇ ಮಾಡಿದ್ದ ನಿರ್ಣಯಗಳನ್ನು ಮುರಿಯಹತ್ತಿದ್ದು. ತತ್ಪರಿಣಾಮವಾಗಿ ಇದೀಗ ಮುಗಿದ ಮಹಾಯುದ್ಧದ ಅನರ್ಥಗಳನ್ನು ಜಗತ್ತು ಅನುಭವಿಸಬೇಕಾಯಿತು. ಈ ರಾಷ್ಟ್ರಸಂಘವನ್ನು ಮುಕ್ತಾಯಗೊಳಿಸುವದಕ್ಕಾಗಿ ಜಿನೇವಾದಲ್ಲಿ ಕೂಡಿದ್ದ ಕೊನೆಯ ಸಭೆಯ ಅಧ್ಯಕ್ಷರು ಮಾಡಿದ ಭಾಷಣವು ಮಹತ್ವದ್ದಾಗಿದೆ. ಪ್ರಮುಖ ಸದಸ್ಯ ರಾಷ್ಟ್ರಗಳು ಮಹತ್ವದ ಪ್ರಸಂಗದಲ್ಲಿ ಹೊಣೆಗಾರಿಕೆ ಹೊರುವದಕ್ಕೆ ಸಿದ್ಧವಿರಲಿಲ್ಲ. ಇತಿಹಾಸ ಸಂಗತಿಗಳಿಂದ ನಾವು ಪಾರಾಗಲಾರೆವು ಎಂದು ಅವರು ಹೇಳಿದರು. ರಾಷ್ಟ್ರಸಂಘದ ಕತೆಯಿಂತು ವಿಷಾದಮಯವಾಗಿರುವಾಗ ಅಂಥದೇ ಒಂದು ಮಂಡಳವು ಮತ್ತೆ ಸ್ಥಾಪಿತವಾಗಿದೆ. ಈ ನವಮಂಡಳದ ಉದ್ದೇಶವು ಜಾಗತಿಕ ಶಾಂತಿಸೌಹಾರ್ದವಾಗಿದೆ. ಕೆಲವನ್ನು ಬಿಟ್ಟು ಅವೇ ಪ್ರಮುಖ ರಾಷ್ಟ್ರಗಳು ಈ ಮಹಾಮಂಡಳದ ಪ್ರಮುಖ ಸದಸ್ಯ ರಾಷ್ಟ್ರಗಳು. ಇವರು ಹಿಂದಿನ ರಾಷ್ಟ್ರಸಂಘದಿಂದ ಮಹತ್ವದ ಪಾಠ ಕಲಿಯುವಂತಿದೆ. ಸ್ವಾರ್ಥ, ಅಧಿಕಾರಪ್ರವೃತ್ತಿ, ರಾಕ್ಷಸೀ ಮಹತ್ವಾಕಾಂಕ್ಷೆ ಮೊದಲಾದವುಗಳನ್ನು ಬಿಟ್ಟ ಹೊರತು ಇಂಥ ಸಂಘಗಳ ಉದ್ದಿಷ್ಟ ಸಫಲವಾಗಲಾರದು. ಈ ಮಹಾಮಂಡಳದ ಸಧ್ಯದ ಧೋರಣವನ್ನು ನೋಡಿದರೆ ಮಹತ್ವದ ಹೊಣೆಗಾರಿಕೆಯನ್ನು ಹೊರಲು ಅವು ಸಿದ್ಧವಿಲ್ಲೆಂಬುದು ಸ್ಪಷ್ಟವಾಗುತ್ತದೆ. ಮೂರನೇ ಮಹಾಯುದ್ಧವಾಗಬಾರದೆಂದಿದ್ದರೆ ಈ ಮಹಾಮಂಡಳದವರು ಹಿಂದಿನ ತಪ್ಪನ್ನೆ ಮತ್ತೆ ಮಾಡಬಾರದು. ಆ ಬಗೆಯ ಸುಬುದ್ಧಿ ಅವರಿಗೆ ಬಂದಾಗಲೆ ಜಾಗತಿಕ ಶಾಂತಿ, ಸುಖ, ಸೌಹಾರ್ದಗಳು ನೆಲಸಲನುವಾಗುವದು.

# ಮುಸ್ಲಿಂಲೀಗಿನ ಪಾಕಿಸ್ತಾನ ಬೇಡಿಕೆಗೆ

# ಸಾರ್ವತ್ರಿಕ ವಿರೋಧ

## ಮಂತ್ರಿತ್ರಯರೊಡನೆ ಹಿಂದೀ ಪಕ್ಷಪ್ರಮುಖರ ವಿಚಾರವಿನಿಮಯ

### ರಾಯಭಾರದ ಮೊದಲನೆ ಅಂಕು ಮುಗಿಯಿತು

ಮಂತ್ರಿತ್ರಯರ ಕಾರ್ಯವು ನಿಜವಾಗಿ ಎಪ್ರಿಲ ೧ನೆಯ ತಾರೀಕಿನಿಂದ ಪ್ರಾರಂಭವಾದಂತಾಗಿದೆ. ಅಂದಿನಿಂದ ಇಂದಿನ ವರೆಗೆ ಅವರು ಹಿಂದುಸ್ತಾನದಲ್ಲಿಯ ಬೇರೆ ಬೇರೆ ಪಕ್ಷಪ್ರಮುಖರ ಭೆಟ್ಟಿ ತೆಗೆದುಕೊಂಡು ಹಿಂದುಸ್ತಾನದ ಸಮಸ್ಯೆಯ ಬಗೆಗೆ ಮಾತುಕತೆಯಾಡಿದರು. ಕಾಂಗ್ರೆಸ ಮುಖಂಡರು, ಸರ್ ತೇಜಬಹದ್ದೂರ ಸಪ್ರುರವರು, ನರೇಂದ್ರರು ಮತ್ತು ಶೀಖರು ಪಾಕಿಸ್ತಾನದ ಬಗೆಗೆ ತಮ್ಮ ಸ್ಪಷ್ಟ ಅಭಿಪ್ರಾಯವನ್ನು ಮಂಡಿಸಿ ಅದರಿಂದ ಹಿಂದುಸ್ತಾನದ ಸಮಸ್ಯೆ ಬಗೆಹರಿಯದೆ ಮತ್ತಷ್ಟು ಜಟಿಲವಾಗುವುದೆಂದು ಮಂತ್ರಿತ್ರಯರಿಗೆ ಹೇಳಿದರು. ಸಿಂಧ ಶಾಸನ ಸಭೆಯಲ್ಲಿಯ ಸಮ್ಮಿಶ್ರ ಪಕ್ಷದ ಧುರೀಣರಾದ ಸಯ್ಯದರವರು ತಮ್ಮ ಸೂಚನೆಗಳನ್ನು ನಿವೇದಿಸಿ ಜಿನ್ನಾರವರ ಹಟಮಾರಿತನದಿಂದ ಕೊನೆಗೆ ಮುಸಲ್ಮಾನರ ಅಹಿತವೆ ಆಗುವುದೆಂದು ಸ್ಪಷ್ಟಪಡಿಸಿದರು. ಹಿಂದುಸ್ತಾನದಲ್ಲಿಯ ಪ್ರಜಾಪ್ರಮುಖರ ಅಭಿಪ್ರಾಯವೇನೆಂಬುದು ಮಂತ್ರಿತ್ರಯರಿಗೆ ಇದೀಗ ಸ್ಪಷ್ಟವಾಗಿರಲು ಸಾಕು. ಅವರು ಎಪ್ರಿಲ ೨೨ ರಿಂದ ತಮ್ಮ ರಾಯಭಾರದ ಎರಡನೆಯ ಮೆಟ್ಟಿಲನ್ನು ಹತ್ತಲಿರುವರೆಂದು ತಿಳಿಯುತ್ತದೆ. ಅವರೀಗ ದಣಿವದ್ದರಿಂದ ವಿಶ್ರಾಂತಿಯು ಅವಶ್ಯವಾಗಿದೆಯಂತೆ.

### ಅಜಾದರ ಅಭಿಪ್ರಾಯ

ರಾಷ್ಟ್ರಪತಿಗಳಾದ ಮೌಲಾನಾ ಅಬುಲ್ ಕಲಂ ಅಜಾದರು ೩ನೆಯ ತಾರೀಕಿನ ದಿವಸ ಬ್ರಿಟಿಶ್ ಮಂತ್ರಿಗಳನ್ನು ಕಂಡು ತಮ್ಮ ಅಭಿಪ್ರಾಯವನ್ನು ತಿಳಿಸಿದರು. ಅಖಂಡ ಹಿಂದುಸ್ತಾನದ ಘಟ ಸಿದ್ಧಪಡಿಸಲು ಒಂದೇ ಒಂದು ಪ್ರಾತಿನಿಧಿಕ ಮಂಡಲವು ನೇಮಿಸಲ್ಪಡಬೇಕೆಂಬುದು ಕಾಂಗ್ರೆಸ್ಸಿನ ನಿಃಸಂದಿಗ್ಧ ಮತ್ತು ಸ್ಪಷ್ಟ ಅಭಿಪ್ರಾಯವಾಗಿದೆ ದ ಅವರು ತಿಳಿಸಿದರು. ಈ ಮೂಲಭೂತ ಮಾತನ್ನು ಒಪ್ಪಿದಾದರೆ ಅಲ್ಪಸಂಖ್ಯಾಕರಿಗೆ ಹಕ್ಕುಬಾಧ್ಯತೆಗಳನ್ನು ಕೊಡುವಲ್ಲಿ ಕಾಂಗ್ರೆಸ್ಸು ಬೇಕಾದಷ್ಟು ಔದಾರ್ಯ ತೋರಿಸುವುದೆಂದು ಅವರು ಹೇಳಿದರು. ಬ್ರಿಟಿಶ್ ಸರಕಾರದವರು ಹಿಂದುಸ್ತಾನಕ್ಕೆ ಸಂಪೂರ್ಣ ಅಧಿಕಾರವನ್ನು ಬಿಟ್ಟುಕೊಡಲಿಕ್ಕೆ ಬೇಕೆಂಬುದು ಕಾಂಗ್ರೆಸ್ಸಿನ ಮುಖ್ಯ ಮತ್ತು ಮಹತ್ವದ ಬೇಡಿಕೆಯಾಗಿದೆಂಬುದನ್ನೂ ಅವರು ಮಂತ್ರಿತ್ರಯರ ಮನದಟ್ಟು ಮಾಡಿದರೆಂದು ತಿಳಿಯುತ್ತದೆ.

ಮೌಲಾನಾ ಅಜಾದರು ಮಂತ್ರಿತ್ರಯರ ಭೆಟ್ಟಿಯ ನಂತರ ಇದೇ ೧೨ನೇ ತಾರೀಕಿಗೆ ಕಾಂಗ್ರೆಸ ಕಾರ್ಯಕಾರೀ ಮಂಡಳದ ಸಭೆಯನ್ನು ಕರೆದಿರುವರು. ಅನಂತರ ಅವರು ಮಂತ್ರಿತ್ರಯರಿಗೆ ನಿಶ್ಚಿತವಾದ ಸೂಚನೆಗಳನ್ನು ಮಾಡಲಿರುವರು. ರಾಷ್ಟ್ರಪತಿಗಳು ಮಂತ್ರಿಗಳೊಡನೆ ಮಾತುಕತೆ ಪ್ರಾರಂಭಮಾಡುವ ಮೊದಲು ಎರಡು ಮಹತ್ವದ ಬೇಡಿಕೆಗಳನ್ನು ಮಾಡಿದರೆಂದು ತಿಳಿಯುತ್ತದೆ. ೧) ಕೂಡಲೆ ಕೇಂದ್ರದಲ್ಲಿ ತಾತ್ಪೂರ್ತಿಕ ಲೋಕಪ್ರಾತಿನಿಧಿಕ ಸರಕಾರದ ಸ್ಥಾಪನೆಯಾಗಬೇಕು. ದೇಶದಲ್ಲಿಯ ಮುಖ್ಯ ರಾಜಕೀಯ ಪಕ್ಷಗಳ ಪ್ರಾತಿನಿಧ್ಯ ಅದರಲ್ಲಿರತಕ್ಕದ್ದು. ೨) ಅಧಿಕಾರಗಳನ್ನು ಯಾರಿಗೆ ಒಪ್ಪಿಸಬೇಕೆಂಬುದನ್ನು ನಿರ್ಧರಿಸುವ ಮೊದಲು ಅಧಿಕಾರದ ಸ್ವರೂಪ ಮತ್ತು ಮರ್ಯಾದೆಯನ್ನು ಸ್ಪಷ್ಟಪಡಿಸಬೇಕು. ಹೀಗೆ ಅವರು ಅಧಿಕಾರ ಮರ್ಯಾದೆಯನ್ನು ಗೊತ್ತುಪಡಿಸಿದ ನಂತರ ಹಿಂದುಸ್ತಾನದಲ್ಲಿಯ ವಿವಿಧ ಪಕ್ಷ ಪಂಗಡಗಳು ಆ ಅಧಿಕಾರಗಳನ್ನು ಯಾರು ಯಾವ ರೀತಿಯಿಂದ ಉಪಭೋಗಿಸಬೇಕೆಂದು ಮುಂತಾದ್ದನ್ನು ನಿರ್ಣಯಿಸಲನುಕೂಲವಾಗುವದು. ಈ ತಾತ್ಪೂರ್ತಿಕ ಕೇಂದ್ರ ಮಂತ್ರಿಮಂಡಳದ ಬಹುಮತದ ನಿರ್ಣಯವನ್ನು ವಾಯಿಸರಾಯರು ತಳ್ಳಿಹಾಕುವುದಿಲ್ಲೆಂಬ ಆಶ್ವಾಸನವನ್ನು ಕೊಡಬೇಕೆಂದೂ ಅಜಾದರು ಸ್ಪಷ್ಟಪಡಿಸಿದರಂತೆ.

### ಸರ್ ತೇಜರ ಯೋಜನೆ

ಸರ್ ತೇಜಬಹಾದ್ದೂರ ಸಪ್ರುರವರು ೨ನೇ ತಾರೀಕು ಮಂತ್ರಿತ್ರಯರನ್ನು ಭೆಟ್ಟಿಯಾಗಿ ಬಂದ ನಂತರ ೩ನೇ ತಾರೀಕು ಮುಂಜಾನೆ ಪತ್ರಿಕಾ ಪರಿಷತ್ತನ್ನು ಸೇರಿಸಿ ತಮ್ಮ ಅಭಿಪ್ರಾಯವನ್ನು ತಿಳಿಸಿದರು. ಕೂಡಲೆ ಕೇಂದ್ರದಲ್ಲಿ ತಾತ್ಪೂರ್ತಿಕ ರಾಷ್ಟ್ರೀಯ ಸರಕಾರ ಸ್ಥಾಪಿಸುವುದತ್ಯವಶ್ಯವಾಗಿದೆಂದು ಅವರು ಮಂತ್ರಿತ್ರಯರಿಗೆ ಸ್ಪಷ್ಟಪಡಿಸಿದರೆಂದು ತಿಳಿಯುತ್ತದೆ. ದೇಶದಲ್ಲಿ ಈಗ ಗಂಡಾಂತರ ಪರಿಸ್ಥಿತಿಯಿರುವುದರಿಂದ ಸರಕಾರದವರು ಕೇಂದ್ರ ರಾಷ್ಟ್ರೀಯ ಸರಕಾರ ಸ್ಥಾಪನೆಯ ಕಾರ್ಯದಲ್ಲಿ ಕೂಡಲೆ ಪ್ರವೃತ್ತರಾಗಬೇಕು. ಪ್ರಾಂತಗಳಲ್ಲಿ ಪ್ರಾತಿನಿಧಿಕ ಸರಕಾರಗಳು ಈಗ ಸ್ಥಾಪಿಸಲ್ಪಟ್ಟಿದ್ದು ಕೇಂದ್ರದಲ್ಲಿ ಪ್ರಜೆಗಳಿಗೆ ಹೊಣೆಗಾರವಿಲ್ಲದ ಸರಕಾರವಿದ್ದರೆ ಮೇಲಿಂದಮೇಲೆ ತಿಕ್ಕಾಟಕ್ಕವಕಾಶವುಂಟಾಗುವುದೆಂದೂ ಅವರು ಹೇಳಿದರು. ಸಂಸ್ಥಾನಗಳ ಹಕ್ಕುಬಾಧ್ಯತೆಗಳ ರಕ್ಷಣೆಗಾಗಿ ಈ ಕೇಂದ್ರ ಸರಕಾರದಲ್ಲಿ ಕಾರ್ಯಕಾರಿ ಮಂಡಳದ ಸದಸ್ಯರ ತರಗತಿಯ ರಾಜಕೀಯ ಸಲಹೆಗಾರರೊಬ್ಬರಿರಬೇಕು. ಮುಸ್ಲಿಂಲೀಗಿನವರ ಧೋರಣೆಯ ಬಗ್ಗೆ ಅವರ ಅಭಿಪ್ರಾಯ ಕೇಳಲಾಗಿ ಅವರಿಗೆ ಬೇಕಾದಷ್ಟು ಸೌಕರ್ಯಗಳನ್ನು ಕೊಡಿರಿ ಆದರೆ ಯಾವ ಸರ್ವಾಧಿಕಾರಿಯ ಹೇಳಿಕೆಯಂತೆಯೇ ನಡೆಯಲು ನಾವೇನು ನೈತಿಕ ಇಲ್ಲವೆ ರಾಜಕೀಯ ಹೊಣೆಗಾರಿಕೆ ಹೊತ್ತಿಲ್ಲೆಂದು ಅವರು ಸ್ಪಷ್ಟಪಡಿಸಿರುವರು.

### ಶೀಖ ಮುಖಂಡರ ಚರ್ಚೆ

ಶೀಖ ಮುಖಂಡರಾದ ಸರದಾರ ಬಲದೇವಸಿಂಗರು ೫ ನೇ ತಾರೀಕು ಮಂತ್ರಿತ್ರಯರನ್ನು ಕಂಡು ೪೫ ನಿಮಿಷ ಅವರೊಡನೆ ವಿಚಾರ ವಿನಿಮಯ ಮಾಡಿದರು. ಪಾಕಿಸ್ತಾನ, ಶೀಖಿಸ್ತಾನ, ಘಟನಾ ಸಮಿತಿಯ ರಚನೆ, ಅಖಂಡ ಹಿಂದುಸ್ತಾನದಲ್ಲಿ ಶೀಖರ ಸ್ಥಾನಮಾನ ಮೊದಲಾದವುಗಳ ಬಗ್ಗೆ ಮಂತ್ರಿತ್ರಯರು ಮಾಸ್ಟರ ತಾರಾಸಿಂಗರೊಡನೆ ಚರ್ಚಿಸಿದರು. ಶೀಖರು ಪಾಕಿಸ್ತಾನಕ್ಕೆ ಒಪ್ಪಲಾರರು. ಆದರೆ ಬಲಾತ್ಕಾರದಿಂದ ಅದನ್ನು ಹೇರಿದರೆ ಶೀಖರಿಗೆ ಶೀಖರಾಷ್ಟ್ರ ಬೇಕು ಎಂದು ಹೇಳಿದರಂತೆ. ಸೀಖಿಸ್ತಾನದ ಗಡಿ, ಅದನ್ನು ರಚಿಸುವ ಪದ್ಧತಿ ಮೊದಲಾದವುಗಳ ಬಗ್ಗೆಯೂ ಅವರು ಚರ್ಚಿಸಿದರಂತೆ. ಪಂಜಾಬದ ಈಗಿನ ಪರಿಸ್ಥಿತಿಯ ಸಂಬಂಧದಲ್ಲಿ ಅವರು ಅಸಮಾಧಾನ ವ್ಯಕ್ತಪಡಿಸಿ ಅಖಂಡ ಹಿಂದುಸ್ತಾನದಲ್ಲಿ ಸೀಖರಿಗೆ ಪ್ರತ್ಯೇಕ ಪ್ರಾಂತ ದೊರೆಯುವಂತೆ ಗಡಿನಾಡಿನ ಪುನರ್ವ್ಯವಸ್ಥೆಯಾಗಬೇಕು. ಅಥವಾ ಪಂಜಾಬದಲ್ಲಿ ಮುಸ್ಲಿಂರಿಗೆ ಬಹುಮತ ದೊರೆತ ಘಟನಾತ್ಮಕ ವ್ಯವಸ್ಥೆಯಲ್ಲಿ ಬದಲಾವಣೆಯಾಗಬೇಕು ಎಂದೂ ಅವರು ಹೇಳಿದರಂತೆ. ಮುಸ್ಲಿಂ ಲೀಗಿನ ಬೇಡಿಕೆಯನ್ನು ಎಂಥ ಪ್ರಸಂಗದಲ್ಲಿಯೂ ಬ್ರಿಟಿಶರು ಒಂದು ವೇಳೆ ಅದನ್ನು ಒಪ್ಪಿದರೂ ಕಾಂಗ್ರೆಸ್ಸು ಅದನ್ನು ಒಪ್ಪಲಾರದೆಂದು ಪಂಡಿತ ಜವಾಹರಲಾಲರು ಸುದ್ದಿಗಾರರ ಸಭೆಯಲ್ಲಿ ಸ್ಪಷ್ಟಪಡಿಸಿ ಮಾಸ್ಟರ ತಾರಾಸಿಂಗರ ಸಂಶಯ ನಿವಾರಿಸಿದರು. ಕಾಂಗ್ರೆಸ್ಸು ಒಂದು ವೇಳೆ ಅದನ್ನು ಒಪ್ಪಿದರೆ ಅದು ಕಾರ್ಯರೂಪಕ್ಕೆ ಬರಲಾರದು. ಈ ಜಗತ್ತಿನಲ್ಲಿ ಯಾವದೇ ಶಕ್ತಿ, —ರಾಷ್ಟ್ರಸಂಘವು ಸಹ— ಜಿನ್ನಾರು ಕೇಳುವ ಪಾಕಿಸ್ತಾನ ಕೊಡಿಸಲು ಸಮರ್ಥವಾಗಲಾರದು ಎಂದೂ ಅವರು ಹೇಳಿದರು.

### ನರೇಂದ್ರರ ಅಭಿಪ್ರಾಯ

ರಾಷ್ಟ್ರೀಯ ಸಂರಕ್ಷಣೆ ಹಾಗೂ ವಾಹನ ಸೌಕರ್ಯ ಮೊದಲಾದ ವಿಷಯಗಳಲ್ಲಿ ಕೇಂದ್ರ ಸರಕಾರಕ್ಕೆ ಅಧಿಕಾರ ಬಿಟ್ಟುಗೊಡಲು ನರೇಂದ್ರರೂ ಸಿದ್ಧರಿರುವರು. ಆದರೆ ಹಿಂದುಸ್ತಾನದ ವಿಭಜನೆಗೆ ಅವರೆಂದೂ ಒಪ್ಪಲಾರರು ಎಂದು ಸರ್ ಸಿ. ಪಿ. ರಾಮಸ್ವಾಮಿಯವರು ಅಭಿಪ್ರಾಯ ಪಟ್ಟಿರುವರು. ಯಾವದೇ ಯುದ್ಧವಾಗಲಿ, ಆಗದಿರಲಿ ಹತ್ತು ಲಕ್ಷ ಜನ ಅಥವಾ ಒಂದು ಕೋಟಿ ಜನ ಮರಣ ಹೊಂದಲಿ ನಾವು ದೇಶದ ವಿಭಜನೆಯನ್ನು ನಾವು ವಿರೋಧಿಸುವೆವು. ಇದು ಸರ್ವಸಾಧಾರಣ ಎಲ್ಲ ನರೇಂದ್ರರ ಅಭಿಪ್ರಾಯವಾಗಿದೆ. ಹಿಂದುಸ್ತಾನದಿಂದ ಹೊರಡಲು ಬ್ರಿಟಿಶರು ನಿರ್ಧರಿಸಿದ ಕೂಡಲೆ ಬ್ರಿಟನ್ ಮತ್ತು ಸಂಸ್ಥಾನಗಳೊಳಗಿದ್ದ ಒಪ್ಪಂದಗಳು ವ್ಯರ್ಥವಾಗುವವು. ಮತ್ತು ಸಂಸ್ಥಾನಗಳು ಹಿಂದುಸ್ತಾನ ಸರಕಾರದೊಡನೆ ಹೊಸ ಒಪ್ಪಂದ ಮಾಡಿಕೊಳ್ಳಬೇಕಾಗುವದು. ಸಮಭಾಗಿಗಳಾಗಿ ಈ ಒಪ್ಪಂದ ಮಾಡಿಕೊಳ್ಳಲಡ್ಡಿಯಿಲ್ಲ. ವಿದೇಶ ವಿಚಾರ, ವಾಹನ ಸೌಕರ್ಯ ರಾಷ್ಟ್ರೀಯ ಸಂರಕ್ಷಣೆ, ಸುಂಕ ಹಾಗೂ ಅದೇ ರೀತಿಯ ಇನ್ನಿತರ ಅಖಿಲ ಭಾರತಕ್ಕೆ ಸಂಬಂಧಿಸಿದ ವಿಷಯಗಳಲ್ಲಿ ಕೇಂದ್ರ ಸರಕಾರದ ಅಧಿಕಾರಕ್ಕೊಳಗಾಗದೆ ಗತ್ಯಂತರವಿಲ್ಲೆಂದೂ ಅವರು ಹೇಳಿದರು. ಸರ್ ಸಿ. ಪಿ. ಯವರಲ್ಲದೆ ಛತ್ತಾರಿ ನವಾಬ, ಸರ್ ಮಿರ್ಜಾ ಇಸ್ಮಾಯಿಲ್‌ರು ಇವರೊಡನೆಯೂ ಮಾತುಕತೆಯಾಡಿದರು. ಸರ್ ಮಿರ್ಜಾ ಇಸ್ಮಾಯಿಲರು ರಾಷ್ಟ್ರೀಯ ಸರಕಾರವನ್ನು ಕೂಡಲೆ ರಚಿಸಬೇಕೆಂದೂ ಘಟನಾ ಸಮಿತಿ ಸ್ಥಾಪನೆಯ ಮಾರ್ಗ ನಿರೀಕ್ಷಿಸಬಾರದೆಂದು ಸೂಚಿಸಿದರೆಂದೂ ತಿಳಿಯುತ್ತದೆ. ಸ್ವತಂತ್ರ ಹಿಂದುಸ್ತಾನವು ಬ್ರಿಟಿಶ ಸರಕಾರದೊಡನೆ ಒಪ್ಪಂದ ಮಾಡಿಕೊಂಡು ಎರಡೂ ರಾಷ್ಟ್ರಗಳು ಸಂಯುಕ್ತ ಹಿತವನ್ನಿಟ್ಟುಕೊಂಡು ಮುಂದೆ ಸಾಗಬೇಕೆಂದೂ ಅವರು ಹೇಳಿದರು. ಛತ್ತಾರಿ ನವಾಬರು ಘಟನೆಯಲ್ಲಿ ಹೈದರಾಬಾದ ಸಂಸ್ಥಾನವು ಯಾವ ಸ್ಥಾನವನ್ನಾಶ್ರಯಿಸುವದೆಂಬದನ್ನು ವಿವರಿಸಿದರೆಂದೂ ತಿಳಿಯುತ್ತದೆ.

### ಪಾಕಿಸ್ತಾನವೇ ಬೇಕು

ಬ್ಯಾ. ಜಿನ್ನಾರವರು ಮತ್ತು ಅವರ ಅನುಯಾಯಿಗಳು ಪಾಕಿಸ್ತಾನವಿಲ್ಲದೆ ಹಿಂದುಸ್ತಾನದ ಸಮಸ್ಯೆ ಬಗೆಹರಿಯಲಾರದೆಂದು ಮಂತ್ರಿತ್ರಯರಿಗೆ ಗಟ್ಟಿಯಾಗಿ ಹೇಳಿದರೆಂದು ತಿಳಿಯುತ್ತದೆ. ಪಂಜಾಬದ ಲೀಗ ಧುರೀಣರಾದ ನೂನರು ಬ್ರಿಟಿಶ ಮಂತ್ರಿಗಳಿಗೆ ಹೆದರಿಕೆಯನ್ನೆ ಹಾಕಿರುವರೆಂದು ತಿಳಿಯುತ್ತದೆ. ಪಾಕಿಸ್ತಾನ ತತ್ವಕ್ಕೆ ಒಪ್ಪಬೇಕು ಮತ್ತು ಎರಡು ಘಟನಾ ಸಮಿತಿ ನೇಮಿಸಬೇಕೆಂಬ ಗೊತ್ತುವಳಿ ಲೀಗ ಶಾಸನ ಸಭೆ ಸದಸ್ಯರ ಪರಿಷತ್ತಿನಲ್ಲಿ ಸ್ವೀಕೃತವಾಯಿತು. ಫಿರೋಜಖಾನ ನೂನರು ಈ ಪರಿಷತ್ತಿನಲ್ಲಿ ಮಾತಾಡುತ್ತ ಹಿಂದೂ ಜನರು ಪಾಕಿಸ್ತಾನ ಕೊಟ್ಟರೆ ನಮ್ಮ ಮಿತ್ರರಾಗುವರು. ಬ್ರಿಟಿಶರು ಕೊಟ್ಟರೆ ಅವರೇ ನಮ್ಮ ಮಿತ್ರರಾಗುವರು. ಇವರಿಬ್ಬರೂ ಕೊಡದಿದ್ದರೆ ರಶಿಯಾವು ಅದನ್ನು ಕೊಡುವದು ಎಂದು ಹೇಳಿದರು. ಬ್ರಿಟಿಶರು ನಮ್ಮನ್ನು ಹಿಂದೂ ಆಡಳಿತಕ್ಕೆ ಒಪ್ಪಿಸಿ ಹೋದರೆ ಮುಸಲ್ಮಾನರು ಮಾಡಬಹುದಾದ ಅನರ್ಥವು ಜಂಗಿಸಖಾನನನ್ನು ಮೀರಿಸುವದು ಎಂದೂ ಅವರು ನುಡಿದರು.

### ಸಯ್ಯದರ ವಿರೋಧ

ಸಿಂಧ ಶಾಸನ ಸಭೆಯ ಸಮ್ಮಿಶ್ರ ಪಕ್ಷದ ಧುರೀಣರಾದ ಜಿ. ಎಂ. ಸಯ್ಯದರು ಮಂತ್ರಿತ್ರಯರನ್ನು ಭೆಟ್ಟಿಯಾಗಿ ೪೦ ನಿಮಿಷ ಅವರೊಡನೆ ಮಾತುಕತೆ ಮಾಡಿದರು. ಪ್ರಾಂತಗಳ ಸಾರ್ವಭೌಮತ್ವವನ್ನು ಅವರು ಪ್ರತಿಪಾದಿಸಿ ಸಂರಕ್ಷಣ ಮತ್ತು ವಿದೇಶ ಖಾತೆಗಳನ್ನು ಕೇಂದ್ರಕ್ಕೆ ಒಪ್ಪಿಸಲು ಅಡ್ಡಿಯಿಲ್ಲೆಂದು ತಿಳಿಸಿದರಂತೆ. ಕೇಂದ್ರದಲ್ಲಿ ಎಲ್ಲ ಪ್ರಾಂತಗಳ ಜೊತೆಗೆ ಸಿಂಧಕ್ಕೂ ಸಮಾನ ಅಧಿಕಾರ ಕೊಡಬೇಕೆಂದು ಕೇಳಿದರಂತೆ. ದೊಡ್ಡ ದೊಡ್ಡ ಸಂಸ್ಥಾನಗಳಿಗೆ ಸಾರ್ವಭೌಮತ್ವ ಕೊಡಬೇಕು ಮತ್ತು ಚಿಕ್ಕವುಗಳನ್ನು ದೊಡ್ಡವುಗಳಲ್ಲಿ ಸ್ವಾಯತ್ತತೆಯೊಡನೆ ಅಥವಾ ಪ್ರಜಾಸತ್ತೆಯ ತತ್ವದಂತೆ ವಿಲೀನ ಮಾಡಬೇಕೆಂದರು. ಕಾಂಗ್ರೆಸ ಮತ್ತು ಲೀಗಗಳಲ್ಲಿ ಒಪ್ಪಂದ ಸಾಧ್ಯವಿಲ್ಲದ್ದರಿಂದ ಬ್ರಿಟಿಶ ಮಂತ್ರಿಗಳು ಯೋಗ್ಯ ಕಂಡವರಿಗೆ ಅಧಿಕಾರ ಒಪ್ಪಿಸಬೇಕು. ತತ್ವತಃ ಲೀಗ ಧೋರಣಕ್ಕೆ ನಾನು ಒಪ್ಪಿದರೂ ಜಿನ್ನಾರ ಪಾಕಿಸ್ತಾನ ಯೋಜನೆ ಸಾಧ್ಯ ಮಾಡಿಕೊಳ್ಳುವ ಧೋರಣೆ ಮತ್ತು ಮಾರ್ಗ ಮಾತ್ರ ನನಗೆ ಸೇರುವದಿಲ್ಲ. ಪಾಕಿಸ್ತಾನ ಹಿಂದುಗಳ ಒಪ್ಪಿಗೆಯಿಂದಲೇ ಸಾಧ್ಯ. ಆದರೆ ಲೀಗ ಧುರೀಣರು ಇವೆರಡೂ ಮುಖ್ಯ ಜಾತಿಗಳಲ್ಲಿ ದ್ವೇಷ ವಿರೋಧದಿಂದಲೇ ಅದನ್ನು ಸಾಧ್ಯ ಮಾಡಿಕೊಳ್ಳ ಬಯಸುವರು. ಮೊದಲು ಹಿಂದುಸ್ತಾನದ ಅಧಿಕಾರವನ್ನು ಹಿಂದೀಯರಿಗೊಪ್ಪಿಸಿ ಕೊಟ್ಟು ನೀವು ಹೊರಟು ಹೋಗಿರಿ. ಅನಂತರ ಹಿಂದೀಯರು ತಮ್ಮತಮ್ಮೊಳಗೆ ಬಗೆಹರಿಸಿಕೊಳ್ಳುವರೆಂದು ಮಂತ್ರಿತ್ರಯರಿಗೆ ಹೇಳಿದೆನೆಂದು ಅವರು ತಿಳಿಸಿದರು. ಕಾಂಗ್ರೆಸ ಮತ್ತು ಲೀಗಗಳಲ್ಲಿ ಒಡಂಬಡಿಕೆಯಾಗದಿದ್ದರೆ ರ್‍ಯಾಮ್ಸೆ ಮ್ಯಾಕ್ಡೊನಾಲ್ಡರಂತೆ 'ನಿಮ್ಮ ನಿರ್ಣಯ' ಕೊಡಿರೆಂದು ಮಂತ್ರಿಗಳಿಗೆ ಹೇಳಿದ್ದಾಗಿಯೂ ಅವರು ತಿಳಿಸಿದರು. ಸಂರಕ್ಷಣ, ಪರರಾಷ್ಟ್ರ ಧೋರಣ, ಅಂತರ್‌ರಾಷ್ಟ್ರೀಯ ತಿಕ್ಕಾಟ ಮತ್ತು ಅಲ್ಪಸಂಖ್ಯಾಕರ ಹಕ್ಕುಬಾಧ್ಯತೆಗಳ ರಕ್ಷಣೆ ಮೊದಲಾದ ವಿಷಯಗಳನ್ನು ಸಮಪ್ರಾತಿನಿಧ್ಯದಿಂದ ಬಗೆಹರಿಸಬೇಕು. ಹಿಂದು ಮತ್ತು ಮುಸಲ್ಮಾನರು ೪೫-೪೫ ರಂತೆ ಪ್ರಾತಿನಿಧ್ಯ ಪಡೆಯಬೇಕು. ಅಲ್ಪಸಂಖ್ಯಾಕರಿಗಾಗಿ ೧೦ ಸ್ಥಳಗಳನ್ನು ಕಾಯ್ದಿಡಬೇಕೆಂದು ಮುಂತಾಗಿ ಹೇಳಿದೆನೆಂದೂ ಅವರು ತಿಳಿಸಿದರು.

ಆಂಗ್ಲೊ ಇಂಡಿಯನ್ ಸಂಘದ ಅಧ್ಯಕ್ಷರಾದ ಫ್ರಾಂಕ ಆಂಥನಿಯವರು ಹಿಂದೀ ಕ್ರಿಶ್ಚನ್ ಧುರೀಣರಾದ ಸರ್ ಮಹಾರಾಜಸಿಂಗ ಎಂ. ರತ್ನಸ್ವಾಮಿ ಮತ್ತು ಬಿ. ಎಲ್. ರಾಲಿಯಾ ಅವರು ಬ್ರಿಟಿಶ ಮಂತ್ರಿಯರನ್ನು ೧೦ನೇ ತಾರೀಕು ಭೆಟ್ಟಿಯಾಗಿ ತಮ್ಮ ಧೋರಣೆ ತಿಳಿಸಿದರು. ನಮ್ಮ ಸಮಾಜದವರು ರಾಷ್ಟ್ರೀಯರಲ್ಲಿ ತಾದಾತ್ಮ್ಯ ಹೊಂದಿರುವದರಿಂದ ವಿಶೇಷ ಹಕ್ಕು ಬೇಡುವದಿಲ್ಲೆಂದೂ ಸಂಯುಕ್ತ ಮತದಾರ ಸಂಘಗಳಿಗೆ ತಮ್ಮ ಒಪ್ಪಿಗೆಯಿದೆಯೆಂದೂ ದೇಶದ ವಿಭಜನೆಗೆ ತಾವು ವಿರುದ್ಧವಿರುವದಾಗಿಯೂ ಅವರು ತಾವೊಪ್ಪಿಸಿದ ಮನವಿಯಲ್ಲಿ ಉಲ್ಲೇಖಿಸಿದ್ದಾರೆ. ಹಿಂದೂಮಹಾಸಭೆಯ ಧುರೀಣರಾದ ಲ ಬ ಭೋಪಟಕರರೂ ಮಂತ್ರಿಗಳನ್ನು ಕಾಣಲಿದ್ದಾರೆ. ಅವರು ತಮ್ಮ ಮನವಿಯಲ್ಲಿ ಕೇಂದ್ರದಲ್ಲಿ ರಾಷ್ಟ್ರೀಯ ಸರಕಾರ ಸ್ಥಾಪಿಸಬೇಕು ಸ್ವಾತಂತ್ರ್ಯವನ್ನು ಕೂಡಲೇ ಒಪ್ಪಬೇಕು. ಭಾರತದ ಸಮಗ್ರತೆಯನ್ನೂ ಅಖಂಡತ್ವವನ್ನೂ ಒಪ್ಪಬೇಕು. ಪ್ರಾದೇಶಿಕ ಸ್ವಯಂನಿರ್ಣಯಕ್ಕೆ ವಿರೋಧ ಮೊದಲಾದವುಗಳನು ಉಲ್ಲೇಖಿಸಿರುವರಂತೆ.

ಡಾ. ಅಂಬೇಡಕರರು ದಲಿತ ವರ್ಗದ ಹಕ್ಕುಬಾಧ್ಯತೆಗಳನ್ನು ರಕ್ಷಿಸಬೇಕೆಂದು ಮುಂತಾಗಿ ಕೇಳಿಕೊಂಡಿರುವರು. ಹಿಂದುಗಳ ಕೈಗೆ ತಮ್ಮನ್ನು ಒಪ್ಪಿಸಬಾರದೆಂದು ಅವರು ಬಿನ್ನವಿಸಿಕೊಂಡಿರುವರು. ಹಿಂದುಸ್ತಾನದಲ್ಲಿಯ ಹರಿಜನರು ಸಭೆ ಸೇರಿಸಿ ಡಾ. ಅಂಬೇಡಕರರು ತಮ್ಮ ಪ್ರತಿನಿಧಿಗಳಲ್ಲೆಂದು ಸಾರಿದ್ದಾರೆ.

### ಮಹಾತ್ಮರ ಅಭಿಪ್ರಾಯ

ಪಾಕಿಸ್ತಾನ ಪ್ರಶ್ನೆಯಲ್ಲಿ ಕಾಂಗ್ರೆಸ ಲೀಗಗಳಲ್ಲಿ ಒಡಂಬಡಿಕೆಯಾಗದಿದ್ದರೆ ಅದನ್ನು ಅಂತರ್‌ರಾಷ್ಟ್ರೀಯ ನ್ಯಾಯಮಂಡಳಕ್ಕೊಪ್ಪಿಸಬೇಕೆಂದು ಮಹಾತ್ಮಾ ಗಾಂಧಿಯವರು ಸೂಚಿಸಿರುವರೆಂದು ತಿಳಿಯುತ್ತದೆ.

ಬ್ಯಾ. ಜಿನ್ನಾರು ಭಾವೀ ತಾತ್ಪೂರ್ತಿಕ ಕೇಂದ್ರ ಸರಕಾರದ ಮುಖ್ಯಮಂತ್ರಿಗಳಾಗಬೇಕೆಂದು ಹೇಳಲಾಗುತ್ತದೆಂದು ತಿಳಿಯುತ್ತದೆ. ಕಾಂಗ್ರೆಸ್ಸಿನ ಒಪ್ಪಿಗೆ ಇದಕ್ಕೆ ದೊರೆತರೆ ಹಿಂದೀ ಸಮಸ್ಯೆಯನ್ನು ಬಿಡಿಸಲು ಸರ್ವಾಧಿಕಾರ ಪಡೆದ ಮಂತ್ರಿಶಿಷ್ಟಮಂಡಳವು ಇದಕ್ಕೆ ಸಮ್ಮತಿಸಬಹುದೆಂದೂ ತಿಳಿಯುತ್ತದೆ. ಭೀಕರ ಬರಗಾಲದ ಮೂಲಕ ಬ್ಯಾ. ಜಿನ್ನಾರವರು ಇದಕ್ಕೊಪ್ಪಬಹುದೆಂತಲೂ ಪಾಕಿಸ್ತಾನದ ಬಗ್ಗೆ ಇದ್ದ ತಮ್ಮ ಯೋಜನೆಯನ್ನು ಅಂತರ್‌ರಾಷ್ಟ್ರೀಯ ಮಂಡಳಕ್ಕೊಪ್ಪಿಸಿರೆಂದು ಕೇಳಿಕೊಳ್ಳಲಾಗುವದೆಂದೂ ತಿಳಿಯುತ್ತದೆ.

ಈ ರೀತಿಯಾಗಿ ಬ್ರಿಟಿಶ್ ರಾಯಭಾರದ ವಿಚಾರವಿನಿಮಯದಲ್ಲಿ ಮೊದಲನೆ ಅಂಕು ಕೊನೆಗೊಂಡು ಎರಡನೆ ಅಂಕು ಪ್ರಾರಂಭವಾಗುವದೆಂದು ತಿಳಿಯುತ್ತದೆ.

ಇನ್ನು ಮುಂದೆ ಶಿಷ್ಟಮಂಡಳದವರು ಕಾಂಗ್ರೆಸ ಮತ್ತು ಲೀಗ ಧುರೀಣರನ್ನು ಸಂಯುಕ್ತ ಚರ್ಚೆಗಾಗಿ ಕರೆಯಲಿರುವರೆಂದೂ ತಿಳಿಯುತ್ತದೆ.

# ಅಂತರ್ ರಾಷ್ಟ್ರೀಯ

## ವಿದೇಶಮಂತ್ರಿಗಳ ಸಭೆ

ಇದೇ ಎಪ್ರಿಲ ತಿಂಗಳ ೨೫ ನೇ ತಾರೀಖಿನ ದಿನ ಪ್ಯಾರಿಸದಲ್ಲಿ ಬ್ರಿಟನ, ಅಮೇರಿಕ, ರಶಿಯಾ ಮತ್ತು ಫ್ರಾನ್ಸ ಚತುರ್ರಾಷ್ಟ್ರಗಳ ವಿದೇಶಮಂತ್ರಿಗಳ ಸಭೆ ಕೂಡಲಿದೆ. ಮಾಸ್ಕೋ ಮತ್ತು ಲಂಡನ ಪರಿಷತ್ತುಗಳಲ್ಲಿ ಚೀನಕ್ಕೂ ಸ್ಥಾನ ಕೊಟ್ಟಿದ್ದ ಪಶ್ಚಿಮದ ಈ ರಾಷ್ಟ್ರಗಳು ಈ ಸಲ ಚೀನವನ್ನು ಮೂಲೆಗೆ ತಳ್ಳಿದುದು ಗಮನಾರ್ಹ ಸಂಗತಿ. ವಿದೇಶಮಂತ್ರಿಗಳ ಸಭೆಯಲ್ಲಿ ಜಾಗತಿಕ ಸಮಸ್ಯೆಗಳ ಸ್ವಲ್ಪ ಚರ್ಚಿಸಿ ಅವುಗಳ ನಿವಾರಣೆಯ ಉಪಾಯಗಳನ್ನು ಹುಡುಕಲೆತ್ನಿಸುವರು. ಸರ್ವ ಸಾಧಾರಣವಾಗಿ ಈ ಸಭೆಯಲ್ಲಿ ಸ್ವೀಕೃತವಾದ ನಿರ್ಣಯಗಳ ಅಥವಾ ಎದ್ದ ವಾದವಿವಾದಗಳ ಪ್ರತಿಧ್ವನಿ ರಾಷ್ಟ್ರಸಂಘದಲ್ಲಿ ಕೇಳಬರುತ್ತಿವೆ. ಹೀಗಿರುವಾಗ ಏಶಿಯದಲ್ಲಿರುವ ಒಂದೇ ಒಂದು ಸ್ವತಂತ್ರ, ಶಾಂತಿಪ್ರಿಯ, ದೊಡ್ಡ ರಾಷ್ಟ್ರವಾದ ಚೀನವನ್ನು ತಿರಸ್ಕರಿಸಿದುದು, ಬಹಿಷ್ಕರಿಸಿದುದು ಪಶ್ಚಿಮ ರಾಷ್ಟ್ರಗಳ ಶ್ರೇಷ್ಠಭಾವನೆಯ, ಸ್ವೇಚ್ಛಾಚಾರದ ದಿಗ್ದರ್ಶನವೇ ಸರಿ.

ವಿದೇಶ ಮಂತ್ರಿಗಳ ಸಭೆಯಲ್ಲಿ ಬಾಲ್ಟಿಕ ತ್ರಿರಾಷ್ಟ್ರಗಳ ಪ್ರಶ್ನೆ; ಇಟಲಿ, ಹಂಗರಿ, ರುಮಾನಿಯಾ, ಬಲ್ಗೇರಿಯಾ ಹಾಗೂ ಫಿನಲಂಡಗಳೊಳಗೆ ಮಾಡಿಕೊಳ್ಳುವ ಒಪ್ಪಂದ, ರೂಹ್ರ ಮತ್ತು ರ್‍ಹಾಯಿನಲಂಡಗಳ ಭವಿತವ್ಯ ಮೊದಲಾದ ವಿಷಯಗಳ ಬಗ್ಗೆ ಪರ್ಯಾಲೋಚನೆ ನಡೆಯುವುವೆಂದು ಪ್ರಕಟಿಸಲಾಗಿದೆ. ಆದರೆ, ತೆರೆಯ ಮರೆಯಲ್ಲಿ ಸ್ಪೇನ, ಗ್ರೀಸಿನ ಚುನಾವಣೆ, ಇರಾಣ ಮೊದಲಾದ ಅನೇಕ ಪ್ರಶ್ನೆಗಳು ಚರ್ಚೆಗೆ ಬರುವುದರಲ್ಲಿ ಸಂದೇಹವಿಲ್ಲ. ಇರಾಣದ ಬಿಕ್ಕಟ್ಟು ನಿವಾರಣೆ ಹೊಂದಿರುವುದರಿಂದ ಚತುರ್ರಾಷ್ಟ್ರಗಳ ಮಾತುಕತೆಗೆ ಅನುಕೂಲ ವಾತಾವರಣವುಂಟಾಗಿದ್ದರೂ ಭಿನ್ನಾಭಿಪ್ರಾಯ, ವಾದವಿವಾದ, ತಿಕ್ಕಾಟಗಳಾಗಲು ಅವಕಾಶವುಂಟು.

## ಬಾಲ್ಟಿಕ ರಾಷ್ಟ್ರಗಳು

ಬಾಲ್ಟಿಕ ಸಮುದ್ರದ ಕರಾವಳಿಯಲ್ಲಿರುವ ಲಿಥುವೇನಿಯ, ಲ್ಯಾಟವಿಯಾ ಮತ್ತು ಎಸ್ಟೋನಿಯ ತ್ರಿರಾಷ್ಟ್ರಗಳ ಪ್ರಶ್ನೆಗೆ ಈಗ ಸ್ವಲ್ಪ ಮಹತ್ವ ಬಂದಿದೆ. ಸೋವಿಯೆಟ ಯೂನಿಯನದಲ್ಲಿ ಸೇರಿಕೊಂಡಿರುವ ಈ ರಿಪಬ್ಲಿಕಗಳ ಇಂದಿನ ಸ್ಥಾನಮಾನವನ್ನು ಅಂಗ್ಲೊ-ಅಮೇರಿಕನ್ನರು ಮನ್ನಿಸಬೇಕೆಂದು ರಶಿಯವು ಒತ್ತಾಯ ಮಾಡಿರುವುದೇ ಆ ಪ್ರಶ್ನೆ ಮೇಲಕ್ಕೇಳಲು ಕಾರಣ. ಝಾರ ಸಾಮ್ರಾಜ್ಯದಲ್ಲಂತರ್ಗತವಾಗಿದ್ದ ಈ ಅಂಗ್ಯೆ ಅಗಲದ ರಾಜ್ಯಗಳು ಅಕ್ಟೋಬರ ಮಹಾಕ್ರಾಂತಿಯಲ್ಲಿ ಬ್ರಿಟಿಶ ಮತ್ತು ಜರ್ಮನರ ಬಲ, ಬೆಂಬಲದಿಂದ "ಸ್ವಾತಂತ್ರ್ಯ" ಸಂಪಾದಿಸಿದುವು. ಅಂದಿನಿಂದ ಈ ತ್ರಿರಾಷ್ಟ್ರಗಳು ಕಮ್ಯುನಿಸ್ಟ ರಶಿಯದ ಹಗೆತನ ಕಟ್ಟಿಕೊಂಡುವು. ಈ ದೇಶಗಳು ಬಹಳ ಆಯಕಟ್ಟಿನ ಸ್ಥಳದಲ್ಲಿವೆ. ರಶಿಯದ ಮೇಲೆ ದಂಡೆತ್ತಿ ಹೋಗಲು ಈ ಹೆದ್ದಾರಿಯಿಂದ ಬಹಳ ಅನುಕೂಲ. ಆದುದರಿಂದ 'ಬಾಲ್ಶೆವಿಸಂ' ದ "ಪರಮ ವೈರಿಗಳು" ಯಾವಾಗಲೂ ಈ ರಾಷ್ಟ್ರಗಳಲ್ಲಿ ರಶಿಯದ ವಿರುದ್ಧ ಒಳಸಂಚು ನಡೆಸುತಿದ್ದರು. ಜರ್ಮನಿಯಲ್ಲಿ ನಾಝಿಗಳು ಅಧಿಕಾರಕ್ಕೆ ಬಂದ ಮೇಲಂತೂ ಬಾಲ್ಟಿಕ ತ್ರಿರಾಷ್ಟ್ರಗಳಲ್ಲಿ ಅವರು ಕೋಟೆ ಕೊತ್ತಲ, ವಿಮಾನಗೃಹಗಳನ್ನು ಕಟ್ಟಿದುದುಂಟು. ಆದುದರಿಂದ ಈ ರಾಷ್ಟ್ರಗಳ ಮೂಲಕ ಬರಬಹುದಾದ ಗಂಡಾಂತರವನ್ನು ತಡೆಯಲು ಸೋವಿಯೆಟ ಯೂನಿಯನ ಬಹಳ ಎಚ್ಚರದಿಂದಿತ್ತು. ಆಂಗ್ಲೋ-ಜರ್ಮನ ಯುದ್ಧವು ಆರಂಭವಾದ ಮೇಲೆ ಬ್ರಿಟಿಶ, ಅಮೇರಿಕನ, ಫ್ರೆಂಚ ಹಾಗೂ ಜರ್ಮನರ ಪ್ರಭಾವ ಕುಗ್ಗಿ 'ಬಾಲ್ಶೆವಿಸಂ'ದ ಬಿರುಗಾಳಿ ಬೀಸಿತು. ೧೯೪೦ರಲ್ಲೇ ಈ ದೇಶಗಳಲ್ಲಿ ಸ್ಥಾಪಿಸಲ್ಪಟ್ಟ ಸರಕಾರಗಳು, ರಶಿಯದ ಸಂಯುಕ್ತಘಟನೆಯಲ್ಲಿ ಈ ರಿಪಬ್ಲಿಕಗಳನ್ನು ಸಮಾವೇಶಗೊಳಿಸಬೇಕೆಂದು ವಿನಂತಿ ಮಾಡಿಕೊಂಡವು. ರಶಿಯ ಅದಕ್ಕೊಪ್ಪಿದೆ. ಜರ್ಮನರು ರಶಿಯದ ಮೇಲೆ ದಂಡೆತ್ತಿ ಬಂದಾಗ ಈ ರಿಪಬ್ಲಿಕಗಳು ಜರಿದುಬಿದ್ದರೂ ರಶಿಯನ ಸೈನಿಕರು ವಿಮೋಚಿಸಿದ ಮೇಲೆ ಪುನಃ ಆ ರಿಪಬ್ಲಿಕಗಳು ತಲೆ ಎತ್ತಿವೆ. ರಶಿಯದ ಸಂಬಂಧವನ್ನು ಕಡಿದುಕೊಳ್ಳಲು ಆ ಜನ ಸಿದ್ಧವಿಲ್ಲದೆ ಇದ್ದರೂ ಸೋವಿಯೆಟ ಯೂನಿಯನದಲ್ಲಿ ಸಮಾವೇಶಗೊಳಿಸಿದುದನ್ನು ಇಷ್ಟರವರೆಗೆ ಬ್ರಿಟ, ಅಮೇರಿಕ ಮೊದಲಾದ ಪಶ್ಚಿಮದ ರಾಷ್ಟ್ರಗಳು ಮನ್ನಿಸಿಲ್ಲ. ಇದರಿಂದ ರಶಿಯವು ಅಂಗ್ಲೋ-ಅಮೇರಿಕನ್ನರ ಉದ್ದೇಶಗಳನ್ನು ಸ್ವಲ್ಪ ಸಂಶಯದಿಂದ ಕಾಣುತ್ತಿದೆ. ಯುದ್ಧಾಂತ್ಯವಾದ ಮೇಲೆ ಅನೇಕ ಪ್ರಶ್ನೆಗಳ ಸಂಬಂಧವಾಗಿ ಸಾಮ್ರಾಜ್ಯವಾದಿ ಪಶ್ಚಿಮದ ರಾಷ್ಟ್ರಗಳು ಮತ್ತು ರಶಿಯಗಳೊಳಗೆ ಉಂಟಾದ ಭಿನ್ನಾಭಿಪ್ರಾಯ ಮತ್ತು ನಡೆದ ತಿಕ್ಕಾಟ ರಶಿಯನ ಮುಖಂಡರ ಸಂದೇಹಕ್ಕೆ ಪುಷ್ಟಿ ಕೊಡುತ್ತಿವೆ. ಬಾಲ್ಟಿಕ ತ್ರಿರಾಷ್ಟ್ರಗಳಿಂದ ಓಡಿಬಂದ ರಶಿಯದ ಹಗೆಗಳೊಡನೆ ಕೂಡಿಕೊಂಡು ಮತ್ತೆಲ್ಲಿ ಕೈಗೊಂಬೆ ರಾಜ್ಯಗಳನ್ನು ಪ್ರತಿಷ್ಠಿಸಲೆತ್ನಿಸುವರೋ ಎಂದು ಅಂಜಿಕೆ ರಶಿಯಕ್ಕೆ.

## ರೂಹ್ರ ಮತ್ತು ರಾಯಿನಲಂಡ

ರೂಹ್ರ ಮತ್ತು ರಾಯಿನಲಂಡಗಳ ಪ್ರಶ್ನೆಯೂ ಸ್ವಲ್ಪ ಜಟಿಲವಾದುದು. ಜರ್ಮನಿಗೆ ಸೇರಿರುವ ರೂಹ್ರ ಜಿಲ್ಹೆಯನ್ನು ಪ್ರತ್ಯೇಕಿಸಿ ಫ್ರಾನ್ಸಿನ ಆಡಳಿತೆಗೊಪ್ಪಿಸಬೇಕು ಮತ್ತು ರ್‍ಹಾಯಿನಲಂಡದಲ್ಲಿ ಶಾಶ್ವತ ಮಿತ್ರಸೇನೆಯನ್ನಿಡಬೇಕು. ಎಂದು ಫ್ರೆಂಚರ ವಾದ. ಫ್ರಾನ್ಸಿನ ಭದ್ರತೆಯ ದೃಷ್ಟಿಯಿಂದ ರೂಹ್ರ ಜಿಲ್ಹೆಯನ್ನು ವಿಭಜಿಸಿ ಫ್ರಾನ್ಸಿಗೊಪ್ಪಿಸಬೇಕೆಂದು ಫ್ರೆಂಚರ ಹಟ. ರೂಹ್ರ, ಜರ್ಮನಿಯ ಅತ್ಯಂತ ಮುಖ್ಯ ಔದ್ಯೋಗಿಕ ಜಿಲ್ಹೆ. ಕಲ್ಲಿದ್ದಲು ಕಣಿಗಳು, ಕಾರ್ಖಾನೆಗಳು ಇರುವುದು ಅಲ್ಲೇ. ಅದನ್ನು ಕಳೆದುಕೊಂಡರೆ ಜರ್ಮನಿಗೆ ಪ್ರಾಣಾಂತಿಕ ಪೆಟ್ಟು ಹಾಕಿದಂತೆಯೇ ಸರಿ. ಎಂದೆಂದೂ ತಲೆ ಎತ್ತಿ ಮೆರೆಯಲು ಜರ್ಮನಿಗೆ ಶಕ್ಯವಾಗಲಾರದು. ಫ್ರೆಂಚರ ಅಭಿಲಾಷೆಯಾದರೂ ಅಷ್ಟೆ. ಕಳೆದ ೨೫ ವರುಷಗಳಲ್ಲಿ ಎರಡು ಸಲ ಜರ್ಮನರು ಫ್ರಾನ್ಸಿನ ಮೇಲೆ ದಂಡೆತ್ತಿ ಬಂದುದರಿಂದ ಫ್ರೆಂಚರಿಗೆ ಜರ್ಮನಿಯ ಭೀತಿ ಇನ್ನೂ ಹೋಗಿಲ್ಲ. ಜರ್ಮನಿ ಸೋಲಿನ ಸೇಡನ್ನು ತೀರಿಸಿಕೊಳ್ಳಬಹುದೆಂದು ಅವರ ಕಳವಳ. ಆದುದರಿಂದ ಜರ್ಮನಿಯನ್ನು ರಸಾತಳಕ್ಕೆ ಮೆಟ್ಟಿಬಿಡಲು ಅವರ ಯತ್ನ. ಫ್ರಾನ್ಸದ ಭದ್ರತೆಯು ಅವರ ಉದ್ದೇಶವು. ನ್ಯಾಯ್ಯವಾಗಿದ್ದರೂ ಉಪಾಯವು ಉಚಿತವಾದುದಲ್ಲ. ಏಕೆಂದರೆ ರೂಹ್ರದ ವಿಭಜನೆ ಮತ್ತು ರಾಯಿನಲಂಡಗಳ ಆಕ್ರಮಣದಿಂದ ಜರ್ಮನರು ಸಂತೋಷಪಡಲಾರರು. ಅವರಲ್ಲಿ ಪುನಃ ದ್ವೇಷದ ಭಾವನೆ ಬೆಳೆಯಲು ಅದರಿಂದ ಅವಕಾಶ ಕಲ್ಪಿಸಿಕೊಟ್ಟಂತಾಗುವದು. ಕಳೆದ ಮಹಾಯುದ್ಧವಾದ ಮೇಲೂ ಫ್ರೆಂಚರು ಇದೇ ರೀತಿಯ ವ್ಯವಸ್ಥೆ ಮಾಡಿದ್ದರು. ಆದರೆ ಅದರಿಂದ ಜರ್ಮನರ ಐಕ್ಯ, ನಾಝಿಸಂದ ಬೆಳವಣಿಗೆ, ಆಕ್ರಮಣಶೀಲ ದಬ್ಬಾಳಿಕೆಯನ್ನು ತಡೆಯಲು ಶಕ್ಯವಾಗಲಿಲ್ಲ. ಈಗ ಫ್ರಾನ್ಸ, ಹಿಂದಿನ ಈ ಮಹಾಪರಾಧವನ್ನೇ ಮಾಡಲು ಮತ್ತೆ ಬಯಸಿದೆ. ಭದ್ರತೆ, ಶಾಂತಿ-ಪರಿಪಾಲನೆಗಳಿಗಾಗಿ ಹೊಸರಾಷ್ಟ್ರಸಂಘವು ರಚಿಸಲ್ಪಟ್ಟಿರುವಾಗ ಫ್ರಾನ್ಸ ಮತ್ತೆ ಈ ರೂಹ್ರ ಜಿಲ್ಹೆಯ ಆಡಳಿತೆಯನ್ನು ಬಿಟ್ಟುಗೊಡಲು ಕೇಳಿದುದು ಅದರ ಸಾಮ್ರಾಜ್ಯಾಭಿಲಾಷೆಯನ್ನು ತೋರಿಸುವದಿಲ್ಲವೇ?

## ಗ್ರೀಸ ರಾಜಕಾರಣ

ಗ್ರೀಸಿನಲ್ಲಿ ನಡೆದ ಚುನಾವಣೆಯಲ್ಲಿ ರಾಜಸತ್ತಾವಾದಿ ಪೊಪ್ಯುಲಿಸ್ಟ ಪಕ್ಷದವರಿಗೆ ಜಯ ದೊರೆತಿರುವುದರಿಂದ ಈಗ ಅವರು 'ಸೆಂಟ್ರಲ್ ಬ್ಲಾಕ್' ಪಕ್ಷದವರೊಡನೆ ಕೂಡಿಕೊಂಡು ದೇಶದಲ್ಲಿ ಹೊಸ ಸರಕಾರ ಸ್ಥಾಪಿಸಿರುವರು. ಹೆಸರಿಗೆ ಇದು ಸಮ್ಮಿಶ್ರ ಮಂತ್ರಿಮಂಡಳವಾಗಿರುವುದಾದರೂ ರಾಜಸತ್ತಾವಾದಿಗಳದೇ ಕೈವಾಡ. ವಿದೇಶಮಂತ್ರಿ ಸಲದಾರಿಸರವರು, ಗೃಹಮಂತ್ರಿ ಹಾಗೂ ದೇಶ ಸಂರಕ್ಷಣ ಮಂತ್ರಿ ಪೊಪ್ಯುಲಿಸ್ಟ ಪಕ್ಷದವರೇ. ಪಕ್ಷಾತೀತರಾದ ಪೌಲಿಝುಸರವರು ಈಗ ತಾತ್ಪೂರ್ತಿಕವಾಗಿ ಪ್ರಧಾನ ಮಂತ್ರಿಗಳಾಗಿ ನೇಮಿಸಲ್ಪಟ್ಟಿರುವರು. ಆದರೆ ಪೊಪ್ಯೂಲಿಸ್ಟ ಪಕ್ಷದವರು ತಮ್ಮ ಪಕ್ಷದವರೊಬ್ಬರನ್ನು "ಶೋಧಿಸುವ" ವರೆಗೆ ಅವರು ಅಧಿಕಾರದಲ್ಲಿ ಉಳಿಯುವರು. ಹೊಸ ಸರಕಾರವು ಸ್ಥಾಪಿಸಲ್ಪಟ್ಟುದುದರಿಂದ ರೀಜೆಂಟರಾದ ಡೆಮಸ್ಕಿನೋಸರವರು ರಾಜೀನಾಮೆ ಕೊಟ್ಟಿರುವರು ಮತ್ತು ಪುನಃ ರೀಜೆಂಟರಾಗಬೇಕೆಂದು ಗ್ರೀಸದ ಅರಸರು ಮಾಡಿಕೊಂಡ ವಿನಂತಿಗೆ ಅವರು ಸಮ್ಮತಿಸಿರುವುದಿಲ್ಲ. ಅವರು ಸಮ್ಮತಿಸಲಿ ಬಿಡಲಿ, ಗ್ರೀಸಿನಲ್ಲಿ ರಾಜಸತ್ತಾವಾದಿಗಳ ಮೇಲ್ಗೈಯಾಯಿತು. ಇನ್ನು ದೇಶಭ್ರಷ್ಟ ಗ್ರೀಕ್ ಅರಸರು ಬೇಗನೆ ಸ್ವದೇಶಕ್ಕೆ ಬಂದು ರಾಜ್ಯಸೂತ್ರ ಹಿಡಿಯುವುದರಲ್ಲೂ ಸಂದೇಹವಿಲ್ಲ. ಇದು ಬ್ರಿಟಿಶರಿಗೆ ದೊರೆತ ಜಯ. ಏಕೆಂದರೆ ಗ್ರೀಕ ಅರಸರಿಗೆ ಬ್ರಿಟಿಶರ ಬೆಂಬಲ. ಅವರನ್ನು ಪ್ರತಿಷ್ಠಿಸಲು ಅವರ ಆಶೆ. ಉಗ್ರಗಾಮಿಗಳು ಅಧಿಕಾರಕ್ಕೆ ಬಂದರೆ ಪೂರ್ವ ಭೂಮಧ್ಯ ಸಮುದ್ರದಲ್ಲಿ ಬ್ರಿಟಿಶರ ಒಡೆತನಕ್ಕೆ ಗಂಡಾಂತರ ಬಂದೀತೆಂದು ಅಂಜಿದ್ದ ಚರ್ಚಿಲ್ಲರು ಆದಿಯಿಂದಲ್ಲ ಗ್ರೀಕ ರಾಜವಂಶದ ಸಸಿಗೆ ನೀರೆರೆದು ಸಾಕಿ, ಸಲಹಿ ಪಲ್ಲವಿಸಿ ಫಲ್ಲವಿಸುತಿದ್ದರು. ತಮ್ಮ ಉದ್ದೇಶಕ್ಕೆ ಭಂಗ ಬಂದಾಗ ಬ್ರಿಟಿಶ ಸೇನೆ ಕಳಿಸಿ ರಕುತ ಚೆಲ್ಲಲೂ ಅವರು ಹಿಂದು ಮುಂದೆ ನೋಡಲಿಲ್ಲ. ಅವರ ಆಶೆ ಕೈಗೂಡಿತು.

## ಆಂಗ್ಲೋ-ಇಜಿಪ್ಶಿಯನ ಮಾತುಕತೆ

ಅರಬ ದೇಶಗಳಲ್ಲೆಲ್ಲ ಬೀಸುತ್ತಿರುವ ಸ್ವಾತಂತ್ರ್ಯದ ಬಿರುಗಾಳಿಯು ಇಜಿಪ್ತಗೂ ವ್ಯಾಪಿಸಿದೆ. ೧೯೩೬ ನೇ ಅಂಗ್ಲೋ-ಇಜಿಪ್ಶಿಯನ ಒಪ್ಪಂದದ ಪುನರ್ವಿಮರ್ಶೆಯಾಗಬೇಕೆಂದು ಸಿದಿಕಿ ಪಾಶಾರವರ ಸರಕಾರವು ಬ್ರಿಟನನ್ನು ಒತ್ತಾಯಮಾಡಿದೆ. ಇಡೀ ಇಜಿಪ್ಶಿಯನ ಜನಾಂಗವೇ ಅದಕ್ಕೆ ಬೆಂಬಲ ಕೊಟ್ಟಿರುವುದರಿಂದ ತಿರಸ್ಕರಿಸುವ ಎದೆಗಾರಿಕೆ ಬ್ರಿಟಿಶರಲ್ಲಿಲ್ಲ. ಇಜಿಪ್ತಗೆ ಅರಬ ರಾಷ್ಟ್ರಗಳ ಬೆಂಬಲವಿರುವದೂ ಅದಕ್ಕೊಂದು ಕಾರಣ. ಅರಬ ರಾಷ್ಟ್ರಗಳ ಒಲವನ್ನು ಸಂಪಾದಿಸದೆ ಇದ್ದಲ್ಲಿ ಮಧ್ಯಪೂರ್ವ ರಾಷ್ಟ್ರಗಳಲ್ಲಿರುವ ತನ್ನ ಹಕ್ಕು ಹಿತಗಳಿಗೆ ಮಾತ್ರವಲ್ಲ ಹಿಂದುಸ್ತಾನ ಹಾಗೂ ಪೂರ್ವಾರ್ಣತ್ಯದಲ್ಲಿರುವ ತನ್ನ ಸಾಮ್ರಾಜ್ಯಕ್ಕೆ ಗಂಡಾಂತರವುಂಟೆಂದು ಬ್ರಿಟಿಶರು ಕಂಡುಕೊಂಡಿರುವರು. ರಶಿಯದ ಪ್ರಭಾವ ಬೆಳೆಯಬಹುದೆಂದೂ ಅರಬ ರಾಷ್ಟ್ರಗಳು ರಶಿಯದ ಕಡೆ ಆಕರ್ಷಿಸಲ್ಪಡಬಹುದೆಂದೂ ಅವರ ಎದೆಗುದಿ. ಈ ಎಲ್ಲ ಕಾರಣದಿಂದ ಇಜಿಪ್ತನ್ನು ಸಂತವಿಸಲು ಬ್ರಿಟಿಶರು ಯತ್ನಿಸಿರುವರು. ಮತ್ತು ೧೯೩೬ ನೇ ಅಂಗ್ಲೋ-ಇಜಿಪ್ಶಿಯನ ಒಪ್ಪಂದವನ್ನು ಪುನರ್ವಿಮರ್ಶಿಸಲು ಸಮ್ಮತಿಸಿರುವರು. ಮಾತುಕತೆಗಾಗಿ ಉಭಯ ರಾಷ್ಟ್ರಗಳೂ ಈಗ ತಂತಮ್ಮ ಶಿಷ್ಟಮಂಡಳಗಳನ್ನು ನೇಮಿಸಿವೆ. ಬ್ರಿಟಿಶ ವಿದೇಶ ಮಂತ್ರಿ ಬೆವಿನ್ನರು ಬ್ರಿಟಿಶ ಶಿಷ್ಟಮಂಡಳದ ಮುಖ್ಯಸ್ಥರು. ಇಜಿಪ್ತದ ಪ್ರಧಾನ ಮಂತ್ರಿ ಸಿದಿಕಿ ಪಾಶಾರವರೇ ಇಜಿಪ್ಶಿಯನ್ ಶಿಷ್ಟಮಂಡಳದ ಮುಖಂಡರಾಗಿರುವರು. ಹೊಸ ಒಪ್ಪಂದಕ್ಕಾಗಿ ಸಿದಿಕಿ ಪಾಶಾರವರು ಒಂದು ಕರಡನ್ನು ತಯಾರಿಸಿರುವರಂತೆ. ಇಜಿಪ್ತದ ದಕ್ಷಿಣದಲ್ಲಿರುವ ಸುಡಾನ ಪ್ರಾಂತವನ್ನು ಬಿಟ್ಟುಕೊಡಬೇಕೆಂಬ ಸೂಚನೆಯೂ ಅದರಲ್ಲಿದ್ದಂತೆ ಕಾಣುತ್ತದೆ. ಇಟಾಲಿಯನ ಲಿಬ್ಯವನ್ನು ಇಜಿಪ್ತದ ಧರ್ಮದರ್ಶಿತ್ವ ಆಡಳಿತೆಗೊಪ್ಪಿಸಬೇಕೆಂದು ಅರಬ ಲೀಗಿನ ಅಝಾಂ ಪಾಶಾರವರು ಗರ್ಜಿಸಿರುವರು. ಇಜಿಪ್ತದಿಂದ ಬ್ರಿಟಿಶ ಸೈನಿಕರನ್ನು ಹಿಂದಕ್ಕೆ ಕರೆಸಿಕೊಳ್ಳಬೇಕೆಂಬ ಕರಾರೂ ಇದ್ದ ಹಾಗೆ ಕಾಣುತ್ತದೆ. ಬ್ರಿಟನ ಇಜಿಪ್ತದ ಆಶೆ ಆಕಾಂಕ್ಷೆಯನ್ನು ಎಷ್ಟರ ಮಟ್ಟಿಗೆ ಮನ್ನಿಸುವುದೋ ನೋಡಬೇಕಾಗಿದೆ. ಏಕೆಂದರೆ ಇಜಿಪ್ತ ಬಹಳ ಆಯಕಟ್ಟಿನ ಸ್ಥಳ. ಯುರೋಪಿನಿಂದ ಹಿಂದುಸ್ತಾನ ಹಾಗೂ ಪೌರ್ವಾತ್ಯ ಪ್ರದೇಶಗಳಿಗೆ ತೆರಳುವ ಹೆದ್ದಾರಿಯಲ್ಲಿದೆ. ಇಜಿಪ್ತದಲ್ಲಿ ಒಡೆತನವನ್ನು ಸ್ಥಾಪಿಸಲು ಫ್ರೆಂಚರೂ ಬ್ರಿಟಿಶರೂ ನೂರಾರು ವರುಷಗಳವರೆಗೆ ಹೋರಾಡಿದ್ದರು. ಡಿ ಲಸೆಪ್ಸ್ ಸುಯೇಜ್ ಕಾಲುವೆಯನ್ನು ಕಡಿದ ಮೇಲಂತೂ ಇಜಿಪ್ತದ ಮಹತ್ವವು ಹೆಚ್ಚಾಗಿದೆ. ಹೀಗಿರುವಾಗ ಬ್ರಿಟಿಶರು ಅಧಿಕಾರಪ್ರಭಾವವನ್ನು ಬಿಟ್ಟುಕೊಡುವುದು ಸ್ವಲ್ಪ ಸಂದೇಹ

## ಇರಾಣದ ಪ್ರಶ್ನೆ

ರಶಿಯಾ, ಬ್ರಿಟನ ಮತ್ತು ಅಮೇರಿಕ ಈ ತ್ರಿರಾಷ್ಟ್ರಗಳೊಳಗೆ ತಿಕ್ಕಾಟಕ್ಕೆ ಕಾರಣವಾದ ಇರಾಣದ ಪ್ರಶ್ನೆಯು ಸ್ವಲ್ಪ ಮಟ್ಟಿಗೆ ಬಗೆಹರಿದಂತಾಗಿದೆಯೆಂದೂ ಹೇಳಲಡ್ಡಿಯಿಲ್ಲ. ಇರಾಣ-ರಶಿಯಾ ಒಪ್ಪಂದವಾಗಿರುವದರಿಂದ ಜಾಗತಿಕ ಭದ್ರತಾ ಮಂಡಲವು ಮೇ ೬ ನೇ ತಾರೀಖಿನವರೆಗೆ ಈ ಪ್ರಶ್ನೆಯನ್ನು ಮುಂತಳ್ಳಿದೆ. ರಶಿಯಾ-ಇರಾಣ ಒಪ್ಪಂದದನ್ವಯ ಮಾರ್ಚ ೨೪ ರಿಂದ ಆರು ವಾರಗಳೊಳಗೆ ರಶಿಯನ ಸೈನಿಕರೆಲ್ಲರನ್ನೂ ಹಿಂದೆ ಕರೆಸಿಕೊಳ್ಳಲು ರಶಿಯವು ಸಮ್ಮತಿಸಿದೆ. ಉತ್ತರ ಇರಾಣದಲ್ಲಿ ರಶಿಯಕ್ಕೆ ಎಣ್ಣೆ ಸಲುಗೆಗಳನ್ನು ಇರಾಣವು ಕೊಟ್ಟಿರುವದು. ಅಜರಬೈಜನ ಪ್ರಾಂತಕ್ಕೆ ಸ್ವಾಯತ್ತತೆ ಕೊಡುವ ಕರಾರಿಗೂ ಇರಾಣವು ಒಪ್ಪಿದೆ. ರಶಿಯದ ಬೇಡಿಕೆಗಳನ್ನೆಲ್ಲ ಸುಲ್ತಾನೀ ಸರಕಾರವು ಮನ್ನಿಸಿರುವದು ಇದರಿಂದ ತ್ರಿರಾಷ್ಟ್ರಗಳೊಳಗಿನ ಘರ್ಷಣೆಯು ಕಡಿಮೆಯಾಗಿದೆ ಮಾತ್ರವಲ್ಲ ರಶಿಯಕ್ಕೆ ಅಂತರರಾಷ್ಟ್ರೀಯ ರಾಜಕೀಯ ರಂಗದಲ್ಲಿ ಮಹತ್ತರವಾದ ಒಂದು ಜಯದೊರೆತಿದೆ. ಇರಾಣ, ಇರಾಕ ಹಾಗೂ ಮಧ್ಯಪೂರ್ವ ರಾಷ್ಟ್ರಗಳೆಲ್ಲ ಶತಮಾನಗಳಿಂದ ಬ್ರಿಟಿಶ ಸಾಮ್ರಾಜ್ಯವಾದಿಗಳ ಅಧಿಕಾರ ಪ್ರಭಾವಕ್ಕೊಳಗಾದ ಭೂಭಾಗ. ಝಾರ ರಶಿಯದ ಬೆದರಿಕೆಯಿಂದ ಬ್ರಿಟಿಶರು ಅಫಗಾನಿಸ್ತಾನ, ಇರಾಣ ಹಾಗೂ ಇನ್ನಿತರ ಈ ದೇಶಗಳಲ್ಲಿ ಒಳಸಂಚು ನಡೆಸುತಿದ್ದರು. ತಮಗನುಕೂಲ ಹಾಗೂ ತಮ್ಮ ಮಿತ್ರರು ಅಧಿಕಾರಕ್ಕೆ ಬರುವಂತೆ ಯತ್ನಿಸಿದ್ದರು. ಅಫಗಾನ ಯುದ್ಧಗಳ ಒಳರಹಸ್ಯವದೇ. ಅಮ್ಮಾನುಲ್ಲಾರವರ ಕರುಣ ಕಥೆಯಾದರೂ ಅಷ್ಟೆ. ರಶಿಯದ ಭದ್ರತೆಗೆ ಗಂಡಾಂತರವುಂಟೆಂದು ಕಂಡ ಸ್ಟಾಲಿನ ರಶಿಯವು ಇರಾಣವು ಅಂಗ್ಲೋ-ಅಮೇರಿಕನ್ನರ ಕೈಗೊಂಬೆ ರಾಜ್ಯವಾಗಿ ಪರಿಣಮಿಸುವದನ್ನು ಸಹಿಸಲಿಲ್ಲ, ಇರಾಣವು ಒಳಗಿಂದೊಳಗೆ ಅಮೇರಿಕನ ಮತ್ತು ಡಚ್ಚ ಕಂಪನಿಗಳಿಗೇ ಎಣ್ಣೆ ಸಲುಗೆಗಳನ್ನು ಕೊಟ್ಟುದುದು ಹಾಗೂ ರಶಿಯಕ್ಕೆ ಎಣ್ಣೆ ಸೌಕರ್ಯಗಳನ್ನು ಕೊಡಲು ನಿರಾಕರಿಸಿ ಅದನ್ನು ಅಲಕ್ಷಿಸಿ ಅದನ್ನು ಅಪಮಾನಗೊಳಿಸಿದುದು ರೇಗಿಸಿತು, ಸ್ಟಾಲಿನ್ನರನ್ನು. ಆದುದರಿಂದಲೇ ಪ್ರಬಲ ರಶಿಯಾ ಇರಾಣದ ಪ್ರಶ್ನೆಗೆ ಇಷ್ಟು ಮಹತ್ವ ಕೊಟ್ಟಂತೆ ಕಾಣುತ್ತಿದೆ. ಅದೇನಿದ್ದರೂ ಇರಾಣ-ರಶಿಯಾ ಒಪ್ಪಂದದಿಂದ ನಿರಾಶೆಗೊಂಡ ಬಲಪಕ್ಷದವರು ಈಶಾನ್ಯ ಇರಾಣದ ಮಜಾಂದೆರಾನ ಪ್ರಾಂತದಲ್ಲಿ ದಂಗೆಯನ್ನೆಬ್ಬಿಸಲು ಒಳಸಂಚು ಹೂಡಿರುವರು. ಆದರೆ ದುರದೃಷ್ಟದಿಂದ ಸಾಮ್ರಾಜ್ಯವಾದಿಗಳ ಕೈಗೊಂಬೆಗಳಾಗಿರುವ ಈ ಜನರ ಬೇಳೆ ಬೆಂದಿರುವುದಿಲ್ಲ.

## ಜಪಾನದಲ್ಲಿ ದಂಗೆ

ಇತ್ತ ಜಪಾನದಲ್ಲಿಕೂಡ ರಾಜಕೀಯ ಅಲ್ಲೋಲಕಲ್ಲೋಲವುಂಟಾಗುವ ಚಿಹ್ನೆಗಳು ಕಾಣಿಸತೊಡಗಿವೆ. ಕಳೆದ ವಾರ ಅಮೇರಿಕನ್ನರ ವಿರುದ್ಧ ಜಪಾನರು ಅಲ್ಲಲ್ಲಿ ಆಸ್ತಿವಿನಾಶಕ ಚಟುವಟಿಕೆಗಳನ್ನು ಕೈಕೊಂಡಿರುವರು. ಈ ಚಟುವಟಿಕೆ ಕ್ಷುಲ್ಲಕವಲ್ಲ. ಸಂಘಟಿತ ಹಾಗೂ ದೊಡ್ಡ ಪ್ರಮಾಣದ್ದು. ರಾತ್ರಿ ಕಾಲದಲ್ಲಿ ಜಪಾನರು ಅಮೇರಿಕನ ಕಾವಲುಗಾರರ ಕಣ್ಣು ತಪ್ಪಿಸಿ, ತಂತಿ, ಟೆಲಿಫೋನ ಹಾಗು ಟೆಲಿಪ್ರಿಂಟರ ವ್ಯವಸ್ಥೆಗಳನ್ನೂ ವಾಹನ ಸೌಕರ್ಯಗಳನ್ನೂ ನಾಶಗೊಳಿಸಿರುವರು. ಅಮೇರಿಕನ್ನರಿಗೆ ಸಾವಿರಾರು ಡಾಲರಗಳ ಹಾನಿಯುಂಟಾಗಿದೆ. ಇದಲ್ಲದೆ ಹತ್ತುಸಾವಿರ ಜನ ಪ್ರಧಾನ ಮಂತ್ರಿ ಶಿದೆಹಾರಾರವರ ಮನೆ ಮುಂದೆ ಮತಪ್ರದರ್ಶನಮಾಡಿದರು. ಮತ್ತು ಮಂತ್ರಿಮಂಡಳವು ರಾಜೀನಾಮೆ ಕೊಡಬೇಕೆಂದು ಗುಲ್ಲೆಬ್ಬಿಸಿದರು. ಜಪಾನವು ಕುದಿವ ಕೊಪ್ಪರಿಗೆಯಂತಿರುವುದರಿಂದ ಬೇಗನೆ ಅಲ್ಲಿ ದೊಡ್ಡ ಪ್ರಮಾಣದ ದಂಗೆಯುಂಟಾಗುವಂತೆ ತೋರುತ್ತದೆ.

---

ಕಳೆದ ನವಂಬರದಲ್ಲಿ ಹಿಂದರಾಷ್ಟ್ರ ಸೇನೆಯ ಚಟುವಟಿಕೆ ಸಂಬಂಧದಲ್ಲಿ ಆಕ್ಷೇಪಾರ್ಹ ಭಾಷಣ ಮಾಡಿದರೆಂದು ಸೆರೆಹಿಡಿಯಲ್ಪಟ್ಟು ಖಟ್ಲೆಗೆ ಗುರಿಯಾಗಿದ್ದ ಲಾಲಾ ಕೇದಾರನಾಥ ಸಹಗಲ ಎಂ. ಎಲ್. ಎ., ಸರದಾರ ಹಜಾರಾ ಸಿಂಗ ಇವರ ಮೇಲಿನ ಖಟ್ಲೆಯನ್ನು ಹಿಂತೆಗೆದುಕೊಳ್ಳಲಾಗಿದೆ.

## ಭಾರತದಲ್ಲಿಯ ಶಿಕ್ಷಣ

(೩ನೇ ಪುಟದಿಂದ ಮುಂದರಿದುದು)

ಮುಂಘೋರಣೆಯ ಕೊರತೆಯೆ ಹೆಣ್ಣು ಗಂಡುಗಳ ಶಿಕ್ಷಣದಲ್ಲಿರುವ ಪ್ರಮಾಣ ಭೇದಕ್ಕೆ ಕಾರಣ. ಪರದಾಃಪದ್ಧತಿಯುನ್ನೂ ಅತಂಕಗಳ ಕಾರಣದಲ್ಲಿ ಸೇರಿಸಲಾಗಿತ್ತು. ಆದರೆ ಭಾರತದ ಮುಹಿಳೆಯ ಒಂದು ಭಾಗ ಮಾತ್ರ ಆ ಪದ್ಧತಿಗೆ ಸಿಲುಕಿದೆ ಅದರ ಗುಲ್ಲೆಬ್ಬಿಸಿದಷ್ಟು ವಿಸ್ತೃತವಾಗಿಲ್ಲ, ಅ ವಿಷಯ. ಪುಣೆಯಲ್ಲಿ ಹೆಣ್ಣುಮಕ್ಕಳ ವಿದ್ಯಾಪೀಠವು ಪ್ರಸಿದ್ಧಿಯನ್ನು ಪಡೆಯುತ್ತಲಿದೆಯಲ್ಲದೆ ಸುಧಾರಿಸುತ್ತಲೂ ಇದ್ದುದು ಹೆಮ್ಮಕ್ಕಳ ಶಿಕ್ಷಣದ ಅಗತ್ಯತೆಯುನ್ನು ಸೂಚಿಸುತ್ತದೆ.

ರಾಷ್ಟ್ರೀಯ ರೂಪಾಂತರದ ಮಹತ್ವಾದ ಪ್ರಯೋಗವನ್ನು ನಾವಿಂದು ಭಾರತದಲ್ಲಿ ನಡೆಯಿಸಿದ್ದೇವೆ. ಜನತೆಗೆ ಶಿಕ್ಷಣ ಕೊಡಲಾಗದಿದ್ದರ ಪ್ರಯೋಗ ಯಶಸ್ವಿಯಾಗದು. ಜನತೆಯ ಶಿಕ್ಷಣದಲ್ಲಿ ಒತ್ತಾಯದ ಪ್ರಾಥಮಿಕ ಶಿಕ್ಷಣದ ಕಾರ್ಯಕ್ರಮವೂ ಪ್ರೌಢ ಶಿಕ್ಷಣದ ವಿಸ್ತೃತ ಪದ್ಧತಿಯೂ ಸಮಾವೇಶವಾಗುವುದು. ಸುಶಿಕ್ಷಿತ ಮತದಾರರು ಇರದೆ ಪ್ರಜಾಸತ್ತೆಯು ಸರಿಯಾಗಿ ಕಾರ್ಯ ಮಾಡದು. ಆದರೆ ಆ ಶಿಕ್ಷಣಕ್ಕಾಗಿ ಅನುಕೂಲತೆಯಲ್ಲಿದೆ? ಇತ್ತೀಚಿನ ಸರಕಾರ ಸಂಖೆಗಳಿಂದ ಗೊತ್ತಾಗುವುದು ಭಾರತದಲ್ಲಿ ೪೬೦೩ ಪ್ರೌಢ ಶಿಕ್ಷಣ ಶಾಲೆಗಳು ಇವೆಯೆಂದು.

ಸದ್ಯದ ನಮ್ಮ ಶಿಕ್ಷಣ ಪದ್ಧತಿಯ ಕೆಲ ಮೂಲಭೂತ ಕುಂದುಗಳನ್ನೂ ತೋರಿಸಿದ್ದೇನೆ. ಯುದ್ಧೋತ್ತರ ಸಾಮಾಜಿಕ ಪುನರ್‌ರಚನೆಯ ಭಾಗವಾಗಿ ಭಾರತೀಯ ಮುತ್ಸದ್ದಿಗಳು, ಈ ಪದ್ಧತಿಯನ್ನು ತಳಸೋಸಿ, ಹೊಸ ತಳಹದಿಯ ಮೇಲೆ ನಿಲ್ಲಿಸಿದರೆ, ಜನ ಸುಖಪಡೆಯುವದು. ಅಲ್ಲದೆ ಅಧ್ಯಕ್ಷ ರೂಜವೆಲ್ಟರು ಹೇಳಿದ ಹಾಗೆ ಜೀವಿಸಲು ಯೋಗ್ಯವಾದ ಚತುಃ ಸ್ವಾತಂತ್ರ್ಯಗಳನ್ನು ಉಪಭೋಗಿಸಲೂ ಬಹುದು.

ಯುದ್ಧೋತ್ತರ ಪುನರ್‌ರಚನೆಯ ಬಗ್ಗೆ ಮಾತನಾಡುವ ಮುನ್ನ ನಾವು ಈ ಯುದ್ಧದಲ್ಲಿ ಗೆಲ್ಲಬೇಕು. ನಮಗಾಗಿ ಯುಲ್ಲದಿದ್ದರೂ ನಮ್ಮ ಮಕ್ಕಳ ಸಲುವಾಗಿಯಾದರೂ ಜಗತ್ತಿನಲ್ಲಿ ಸ್ವಾತಂತ್ರ್ಯ-ಸ್ವಾಯತ್ತತೆಗಳು ನೆಲಸುವುದಕ್ಕಾಗಿ ನಾವು ಯುದ್ಧ ಗೆಲ್ಲಬೇಕು. ಭಾರತದಲ್ಲಿಯ ಮೂಲ ದ್ರವ್ಯಗಳ ಯಥೋಚಿತ ಉಪಯೋಗ ಮಾಡಿಕೊಳ್ಳಬೇಕು. ಅದರಿಂದ ಭಾರತದ ರಾಷ್ಟ್ರೀಯ ರಕ್ಷಣೆಗೆ ಅನುವಾಗುವುದು. ಒದಗುವ ಎಲ್ಲ ಶಕ್ತಿಗಳನ್ನು ನಾವು ಇದಕ್ಕಾಗಿ ಹೂಡಬೇಕು. ಯಾವ ಬಗೆಯ ಅಪವ್ಯಯವಾಗದಂತೆ ನೋಡಿಕೊಳ್ಳಬೇಕು.

ಸರಕಾರದ ಯೋಜನೆ-ಆಶ್ರಯಗಳು ಇಲ್ಲದುದರಿಂದ ಉದ್ಯಮಗಳು ಬೆಳೆಯುತ್ತಿಲ್ಲವೆಂದು ಮೇಲೆ ಹೇಳಲಾಗಿದೆ. ಭಾರತದಲ್ಲಿ ಕಚ್ಚಾ ಸರಕಿನ ಸಂಪತ್ತು ಸಾಕಷ್ಟಿದೆ. ವಿಪರೀತ ಪರಿಸ್ಥಿತಿಯಲ್ಲಿಯೂ ಭಾರತದ ಅನೇಕ ವಿದ್ಯಾರ್ಥಿಗಳು ಸ್ವದೇಶ ಪರದೇಶಗಳಲ್ಲಿ ತಂತ್ರವಿದ್ಯೆಯನ್ನು ಪಡೆದಿದ್ದಾರೆ. ಇನ್ನು ಅನೇಕರು ಸಿದ್ಧರಾಗುತ್ತಿದ್ದಾರೆ. ವಿದ್ಯಾಪೀಠಗಳಲ್ಲಿ-ಪ್ರಯೋಗ ಶಾಲೆಗಳಲ್ಲಿ, ಕೆಲವೃಗಳನು ಜನತೆಯ ಒತ್ತಾಯದ ಮೂಲಕ ಸರಕಾರವೆ ಸ್ಥಾಪಿಸಿದೆ. ಸರಿಯಾದ ಯೋಜನೆಗಳು ಇಲ್ಲದ ಮೂಲಕ ಕಲಿತವರ ಸೇವೆಯನ್ನು ಎಷ್ಟು ಪಡೆಯಬೇಕು ಅಷ್ಟು ಪಡೆದಿಲ್ಲ. ಈ ಸಮಸ್ಯೆಯ ಮೊದಲು ಪರಿಹಾರವಾಗಬೇಕು. ಅದನ್ನು ನಾವು ಸಮಾಧಾನಕಾರಕವಾಗಿ ಬಿಡಿಸಬಲ್ಲೆವಾದರೆ, ಯುದ್ಧ ಗೆಲ್ಲುವುದಲ್ಲದೆ ಸುಖ ಸೌಲಭ್ಯಗಳ ನೆಲೆವೀಡಾಗುವ ಹೊಸ ಜಗತ್ತಿನ ಅಡಿಗಲ್ಲು ಹಾಕಿದಂತಾಗುವುದು.

(ಮುಗಿದುದು)

ಬಂಗಾಲದಲ್ಲಿ ಹೊಸದಾಗಿ ಜನಗಣತಿ ಮಾಡಬೇಕೆಂದು ಕೇಂದ್ರ ವಿಧಿ ಮಂಡಲದ ಸದಸ್ಯರಾದ ಶ್ರೀ ಎಸ್. ಕೆ. ರಾಯ ಚೌಧರಿಯವರು ಬ್ರಿಟಿಶ್ ಮಂತ್ರಿತ್ರಯರಿಗೆ ಒಂದು ಮನವಿ ಅರ್ಪಿಸಿದ್ದಾರೆ. ಹೊಸ ಜನಗಣತಿ ಮಾಡಿದರೆ ಬಂಗಾಲದಲ್ಲಿ ಮುಸಲ್ಮಾನರು ಬಹುಸಂಖ್ಯಾಕರಿಲ್ಲೆಂಬ ಸಂಗತಿ ಹೊರಬೀಳುತ್ತದೆಂದು ಅವರು ಅನ್ನುತ್ತಾರೆ.

ಲೀಗೇತರ ಮುಸ್ಲಿಂ ಪಕ್ಷಗಳನ್ನೆಲ್ಲ ರದ್ದುಗೊಳಿಸಿ ಹೊಸ ಅಖಿಲ ಭಾರತ ಅಝಾದ ಮುಸ್ಲಿಂ ಲೀಗ ಪಕ್ಷವೊಂದನ್ನು ಕಟ್ಟುವ ಬಗ್ಗೆ ೭ನೇ ತಾರೀಕು ದಿಲ್ಲಿಯಲ್ಲಿ ಅಲ್ಲಮಾ ಮಶ್ರೂಕಿಯವರು ಕೂಡಿಸಿದ ಸಭೆಯಲ್ಲಿ ಚರ್ಚೆ ನಡೆಯಿತು. ಶೇಟ ಹುಸೇನ ಭಾಯಿ ಲಾಲಜಿ, ಕಾಜಾ ಅಬ್ದುಲ್ ಮಜೀದ, ಡಾ ಫರೂಕಿ ಮೊದಲಾದವರು ಭಾಗವಹಿಸಿದ್ದರು. ಇದೆ ೧೭ ಕ್ಕೆ ಮತ್ತೆ ಪರಿಷತ್ತನ್ನು ಕರೆಯಲಾಗುವದು.

---



---

ಕರ್ಮವೀರ

# ಹರಿಜನ  ಪುರವಣಿ

## ಪ್ರಾರ್ಥಿಸುವಾ

ಹಿಂದುಸ್ತಾನವು ತನ್ನ ರಾಜಕೀಯ ಸ್ವಾತಂತ್ರ್ಯ ಧ್ಯೇಯ ಸಾಧನೆಯನ್ನು ಸಮೀಪಿಸಿರುವದೆಂಬಲ್ಲಿ ಸಂದೇಹವಿಲ್ಲ. ಪ್ರಾರ್ಥನೆಯಿಂದ ನಾವು ಆ ಧ್ಯೇಯವನ್ನು ಮುಟ್ಟುವಾ. ಪ್ರಾರ್ಥನೆಯು ಮುದಿಕೆಯ ಬಡಬಡಿಕೆಯಲ್ಲ. ಅದರ ಮರ್ಮವನ್ನು ನಿಜವಾಗಿ ತಿಳಿದುಕೊಂಡು ವರ್ತಿಸಿದ್ದಾದರೆ ಅದು ಕ್ರಿಯೆಗೆ ಅತ್ಯಂತ ಮಹತ್ವದ ಮತ್ತು ಪ್ರಬಲವಾದ ಸಾಧನೆಯಾಗುವದು.

ಅಹಿಂಸೆಯೆಂದರೇನು ಅದರಿಂದ ಲಬ್ಧವಾದ ಸ್ವಾತಂತ್ರ್ಯವನ್ನು ನಾವೆಂತು ಉಳಿಸಿಕೊಳ್ಳಬಲ್ಲೆವೆಂಬುದನ್ನು ಪ್ರಾರ್ಥನೆಯಿಂದ ಕಂಡು ಹಿಡಿಯುವಾ. ನಮ್ಮ ಅಹಿಂಸೆ ಅಶಕ್ತರ ಅಹಿಂಸೆಯಾಗಿದ್ದರೆ ಇಂಥ ಅಹಿಂಸೆಯಿಂದ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಲು ನಾವೆಂದೂ ಸಮರ್ಥರಾಗಲಾರೆವೆಂಬುದು ಸಿದ್ಧವಾಗುವದು. ಶಸ್ತ್ರಾಸ್ತ್ರಗಳು ನಮ್ಮಲ್ಲಿರುವುದಿಲ್ಲ ಅವುಗಳ ಉಪಯೋಗದ [illegible]ನಮಗಿರುವುದಿಲ್ಲ. ಇದೊಂದೇ ಕಾರಣದಿಂದ ನಾವು ಶಸ್ತ್ರಾಸ್ತ್ರಗಳಿಂದ ನಮ್ಮನ್ನು ಬಹಳ ದಿನಗಳ ವರೆಗೆ ಸಂರಕ್ಷಿಸಿಕೊಳ್ಳಲಾರೆವೆಂಬುದೂ ಸಿದ್ಧವಾಗುತ್ತದೆ. ಅದಕ್ಕೆ ಅವಶ್ಯವಾದ ಓರಣವೂ ನಮ್ಮಲ್ಲಿಲ್ಲ. ತತ್ಪರಿಣಾಮವೆಂದರೆ ನಾವು ಎರಡನೆ ರಾಷ್ಟ್ರದ ಸಹಾಯವನ್ನೇ ಅವಲಂಬಿಸಬೇಕಾಗುತ್ತದೆ. ಆದರೆ ಇದಾದರೂ ಎರಡು ಸಮಾನ ರಾಷ್ಟ್ರಗಳಂತೆ ಅಲ್ಲ; ಅದರೆ, 'ಅಧಮ'ರು ಎಂಬ ಶಬ್ದ ನಮ್ಮ ಕಿವಿಗೆ ಕರ್ಕಶವೆನಿಸಬಹುದಾದರೆ ವಿದ್ಯಾರ್ಥಿಗಳು ಶಿಕ್ಷಕರ ಸಹಾಯವನಪೇಕ್ಷಿಸಿದಂತೆ ನಾವು ಎರಡನೆ ರಾಷ್ಟ್ರದ ನೆರವನ್ನಪೇಕ್ಷಿಸಬೇಕಾಗುವುದು.

ಆದುದರಿಂದ ಸ್ವಾತಂತ್ರ್ಯ ಸಂಪಾದನೆಗಾಗಿ ನಾವು ಅಹಿಂಸೆಯನ್ನಾಶ್ರಯಿಸಿದಂತೆ ಅದನ್ನುಳಿಸಿಕೊಳ್ಳುವುದಕ್ಕಾಗಿಯೂ ಅಹಿಂಸೆಯ ಹೊರತು ಬೇರೆ ಯಾವ ಸಾಧನವೂ ಇರುವುದಿಲ್ಲ. ಇದರ ಅರ್ಥವೆಂದರೆ ನಮ್ಮ ವಿರೋಧಿಗಳೆಂದು ಕರೆದುಕೊಳ್ಳುವವರೆಲ್ಲರ ವಿರುದ್ಧ ಅಹಿಂಸೆಯನ್ನೆ ನಾವು ಪ್ರಯೋಗಿಸುವಾ. ಸುಮಾರು ಮೂರು ದಶಕಗಳಿಂದ ಅಹಿಂಸೆಯನ್ನಾಚರಿಸುತ್ತ ಬಂದ ಮನುಷ್ಯನಿಗೆ ಇದೇನು ಅಷ್ಟೊಂದು ಕಠಿನವೆನಿಸಲಿಕ್ಕಿಲ್ಲ. 'ಕರ್ತವ್ಯ ಮಾಡುವಾಗ ಅವಶ್ಯಬಿದ್ದರೆ ಕೊಲ್ಲಿರಿ ಮತ್ತು ಕೊಲ್ಲಲ್ಪಡಿರಿ' ಎಂಬುದರ ಬದಲು 'ನಿಮ್ಮ ಮಾನರಕ್ಷಣೆ ಮತ್ತು ಸ್ವಾತಂತ್ರ್ಯಕ್ಕಾಗಿ ಮರಣ ಹೊಂದಿರಿ' ಎಂಬುದೆ ಇದರ ಮರ್ಮ. ಶೂರ ಸಿಪಾಯಿ ಏನು ಮಾಡುವನು? ಅವಶ್ಯವೆನಿಸಿದಾಗಲೆ ಅವನು ಕೊಲ್ಲುವನು ಮತ್ತು ತನ್ನ ಪ್ರಾಣವನ್ನು ಆ ಕಾರ್ಯ ಮಾಡುವಾಗ ಗಂಡಾಂತರದಲ್ಲಿ ಕೆಡುಹುವನು. ಹೆಚ್ಚಿನ ಧೈರ್ಯ ಮತ್ತು ಸ್ವಾರ್ಥ ತ್ಯಾಗವನ್ನು ಅಹಿಂಸೆ ಅಪೇಕ್ಷಿಸುತ್ತದೆ. ಎರಡನೆಯವರನ್ನು ಕೊಲ್ಲುವಾಗಲೆ ತನ್ನ ಪ್ರಾಣವನ್ನು ಗಂಡಾಂತರದಲ್ಲಿ ನೂಕಲು ಮನುಷ್ಯನಿಗೆ ಸುಲಭವೇಕಾಗಬೇಕು, ಪ್ರಾಣವನ್ನುಳಿಸುವಾಗ ಅದೇಕೆ ಅಷ್ಟೊಂದು ಅತಿಮಾನುಷವೆನಿಸಬೇಕು? ಕೊಲ್ಲುವ ಕಲೆಯನ್ನು ಕಲಿತು ಪ್ರಯೋಗಿಸುವಾಗಲೆ ನಾವು ನಮ್ಮ ಪ್ರಾಣವನ್ನು ಗಂಡಾಂತರದಲ್ಲಿ ಕೆಡುಹಬಲ್ಲೆವು, ಇಲ್ಲದಿದ್ದರೆ ಇಲ್ಲ ಎಂದು ತಿಳಿದುಕೊಳ್ಳುವುದು ಆತ್ಮ ವಂಚನೆಯೆಂದು ತೋರುತ್ತದೆ. ಅಸತ್ಯದ ಅಭ್ಯಾಸದಿಂದ ಉಂಟಾದ ಮೋಹದಿಂದ ನಾವು ಸಂಪೂರ್ಣವಾಗಿ ಆತ್ಮವಂಚನೆಗೊಳಗಾಗಬಾರದು.

ನೀವು ಪ್ರತಿಪಾದಿಸುತ್ತಿರುವಂತೆ ಈ ವಿಷಯ ವಿಷ್ಟೊಂದು ಸುಲಭವಿದ್ದರೆ ಪ್ರಾರ್ಥನೆಯನ್ನೇಕೆ ಮಧ್ಯದಲ್ಲಿ ತರುವಿರಿ ಎಂದು ಟೀಕಾಕಾರರು ಇಲ್ಲವೆ ಗೇಲಿಗಾರರು ಕೇಳಬಹುದು. ಆದರೆ ಮಾನವನ ಜೀವನದ ವಿವಿಧ ಚಟುವಟಿಕೆಗಳಲ್ಲಿ ಮತ್ತು ಕೊನೆಗೆ ದೇಶ ಸ್ವಾತಂತ್ರ್ಯ ಮತ್ತು ಮಾನ ರಕ್ಷಣೆಯಲ್ಲಿ ಸರ್ವಾರ್ಪಣ ಮಾಡುವ ಶೂರ ಮತ್ತು ಉದಾತ್ತ ಪಾಠ ಕಲಿಯಬೇಕಾದರೆ ಪ್ರಾರ್ಥನೆ ಮೊದಲನೆಯ ಮತ್ತು ಕೊನೆಯ ಸಾಧನವಾಗಿದೆಂಬುದೆ ಇದಕ್ಕೆ ಉತ್ತರ. ಪರಮಾತ್ಮನಲ್ಲಿ ಆತ್ಯಂತಿಕ ಭಕ್ತಿ ಪ್ರಾರ್ಥನೆಗೆ ಅತ್ಯವಶ್ಯವೆಂಬುದು ನಿಃಸಂದಿಗ್ಧವಾಗಿದೆ. ವಿಶ್ವಾಸವಿಲ್ಲದಿದ್ದರೆ ಸತ್ಯಾಗ್ರಹ ಯಶಸ್ವಿಯಾಗುವದೆ ದೂರತೋಪಾಸ್ತು. ಪರಮಾತ್ಮನೆ ಕರಣ, ಕಾರಣ ಮತ್ತು ಕರ್ತಾ ಎಂದೂ ಜೀವನದ ಸಚೇತನ ನಿಯಾಮಕನೆಂದೂ ತಿಳಿದುಕೊಂಡರೆ ಅವನನ್ನು ಯಾವ ಹೆಸರಿನಿಂದ ಕರೆದರೂ ಅಷ್ಟೇ.

ಹೊಸದಿಲ್ಲಿ ಮೋ. ಕ. ಗಾಂಧಿ

೬—೪—೪೬

## ಟೀಕೆ ಟಿಪ್ಪಣಿಗಳು

### ಮಂತ್ರಿಗಳ ಸಂಬಳ

ಮಂತ್ರಿಗಳು ಮತ್ತು ಪ್ರಾಂತಿಕ ಶಾಸನ ಸಭೆಗಳ ಸದಸ್ಯರು ನಿಜಾರ್ಥದಲ್ಲಿ ಜನತೆಯ ಸೇವಕರಾಗಿ ತಮ್ಮ ತಮ್ಮ ಸ್ಥಳಗಳಲ್ಲಿ ಸನ್ನಿಹಿತರಾಗಿರುವರು. ಅವರು ಬ್ರಿಟಿಶರ ಸಂಬಳ ಪ್ರಮಾಣವನ್ನು ಇಟ್ಟುಕೊಳ್ಳಲಾರರು. ಆದರಿಂದ ಅವರಿಗೆ ಹಾಸಿ[illegible]ಣಬದ್ಧ ಸಂಬಳ ಸಿಕ್ಕುವದೆಂದು ಎಲ್ಲರೂ ಸಂಬಳ ತೆಗೆದುಕೊಳ್ಳುವದೂ ಅವಶ್ಯವಿಲ್ಲ. ಸಂಬಳದ ಪ್ರಮಾಣವು ಸಂಬಳದ ಪರಮಾವಧಿಯನ್ನು ಗೊತ್ತು ಪಡಿಸುವದು. ಶ್ರೀಮಂತ ಮನುಷ್ಯನು ಎಲ್ಲ ಸಂಬಳವನ್ನು ಇಲ್ಲವೆ ಅದರ ಕೆಲವೊಂದು ಭಾಗವನ್ನು [illegible]ಕರಿಸುವದು ಲಜ್ಜಾಸ್ಪದವಾಗುವದು. ಸಹ[illegible]ವಾಗಿ ಪುಕ್ಕಟೆ ಸೇವೆ ಮಾಡುವದು ಶಕ್ಯವಿಲ್ಲದಿದ್ದವರಿಗಾಗಿ ಸಂಬಳ. ಜಗತ್ತಿನಲ್ಲಿ ಅತ್ಯಂತ ದೀನ ದರಿದ್ರರ ಪ್ರತಿನಿಧಿಗಳವರು. ಅವರು ಪಡೆಯುವ ಸಂಬಳವೆಲ್ಲ ಬಡವರಿಂದ ದೊರೆಯುತ್ತದೆ. ಈ ಮುಖ್ಯ ಮಾತನ್ನು ಅವರು ನೆನೆದುಕೊಂಡು ಅದರಂತೆ ವರ್ತಿಸಲಿ.

ಹೊಸದಿಲ್ಲಿ ಮೋ. ಕ. ಗಾಂಧಿ

೬-೪-೧೯೪೬

### ರಾಮನಾಮ

ಪ್ರಶ್ನೆ– ರಾಮನಾಮವನ್ನು ಮನಸಿನಲ್ಲಿಟ್ಟುಕೊಂಡರೆ ಸಾಲದೆ? ಬಾಯಿಂದ ಉಚ್ಚರಿಸುವದರಲ್ಲಿ ಹೆಚ್ಚಿನ ಮಹತ್ವವಿದೆಯೆ?

ಉತ್ತರ— ರಾಮನಾಮ ಪಠಿಸುವದರಲ್ಲಿ ಸರ್ವಸ್ವವಿದೆಂದು ನನ್ನ ವಿಶ್ವಾಸ. ರಾಮನಾಮವು ನಿಜವಾಗಿ ಯಾರ ಹೃದಯದಲ್ಲಿ ನಲಿದಾಡುತ್ತಿದೆಯೊ ಅವರು ಅದನ್ನು ಪಠಿಸುವ ಅವಶ್ಯಕತೆಯಿಲ್ಲೆಂಬುದನ್ನು ನಾನು ಒಪ್ಪುತ್ತೇನೆ. ಆದರೆ ಅಂಥ ಮಹಾತ್ಮನಾರೆಂಬುದನ್ನು ನಾನರಿಯೆ. ತದ್ವಿರುದ್ಧವಾಗಿ ರಾಮನಾಮ ಪಠಿಸುವದರಲ್ಲಿಯೆ ಒಂದು ಚಮತ್ಕಾರವಿದೆಂಬುದು ನನ್ನ ಅನುಭವಕ್ಕೆ ಬಂದಿದೆ. ಅದು ಏಕೆ ಮತ್ತು ಹೇಗೆ ಎಂದು ಮುಂತಾದ್ದನ್ನು ತಿಳಿದುಕೊಳ್ಳುವ ಅವಶ್ಯಕತೆಯಿಲ್ಲ.

ಹೊಸದಿಲ್ಲಿ ಮೋ. ಕ. ಗಾಂಧಿ

೬—೪—೪೬

(ಹರಿಜನಸೇವಕದಿಂದ)

## ಹರಿಜನರೊಡನೆ ಭೋಜನ

ಪ್ರಶ್ನೆ- ಶಾಕಾಹಾರಿಗಳಾದ ಸವರ್ಣ ಹಿಂದುಗಳು ಮಾಂಸಾಹಾರಿಗಳಾದ ಹರಿಜನರ ಮನೆಯಲ್ಲಿ ಭೋಜನವೆನ್ನಂತು ಮಾಡಬಲ್ಲರು?

ಉತ್ತರ- ಶಾಕಾಹಾರಿಗಳಾದ ಸವರ್ಣಹಿಂದುಗಳು ಮಾಂಸಾಹಾರಿಗಳಾದ ಹರಿಜನರಲ್ಲಿ ಶಾಕಾಹಾರವನ್ನು ತೆಗೆದುಕೊಳ್ಳಬಲ್ಲರು. ಸಹಭೋಜನವ್ಯವಹಾರವೆಂದರೆ ಮುಂದೆ ಬಡಿಸಿದುದನ್ನೆಲ್ಲ ತಿನ್ನಬೇಕೆಂಬ ನಿಯಮವೇನಿಲ್ಲ. ಅಡಿಗೆ ಮಾಡುವವರ ಕೈಗಳು, ಮತ್ತು ಅನ್ನ ಬಡಿಸಿದ ಪಾತ್ರೆಗಳು ಸ್ವಚ್ಛವಿದ್ದರೆ ಸಾಕು. ನೀರಿಗೂ ಇದೇ ನಿಯಮ ಅನ್ವಯಿಸುವದು. ಅಲ್ಲದೆ ಸಹಭೋಜನವೆಂದ ಕೂಡಲೆ ಎಲ್ಲರೂ ಒಂದೇ ತಾಟಿನಲ್ಲಿ ಉಣ್ಣಬೇಕು ಅಥವಾ ಒಂದೇ ಥಾಲಿಯಲ್ಲಿ ನೀರು ಕುಡಿಯಬೇಕೆಂದೂ ಅರ್ಥವಲ್ಲ. ಆರೋಗ್ಯನಿಯಮಗಳಿಗೆ ಯಾವ ಬಗೆಯಿಂದಲೂ ಭಂಗ ಬರತಕ್ಕದ್ದಲ್ಲ.

ಹೊಸದಿಲ್ಲಿ ಮೋ. ಕ. ಗಾಂಧಿ

೬—೪—೪೬

(ಹರಿಜನಸೇವಕದಿಂದ)

## ನಿಯಮವೇನು?

ಸಂದೇಹರಾಯರೊಬ್ಬರು ಬರೆಯುತ್ತಾರೆ.

"ಇಟಲಿ, ಜರ್ಮನಿ ಮತ್ತು ಜಪಾನಗಳು ಬಲಹೀನವಾಗಿವೆಂಬುದಕ್ಕೆ ನಾನು ಒಪ್ಪುತ್ತೇನೆ, ಆದರೆ ನೀವನ್ನುವಂತೆ ಆ ಹಾನಿಗೆ ಹಿಂಸೆಯ ಬಗ್ಗೆ ಇದ್ದ ಅವರ ವಿಶ್ವಾಸ ಕಾರಣವೆ ಇಲ್ಲವೆ ಯುದ್ಧ ಮೂಲಕ ಅವರಿಗೆ ಬಂದ ವಿಪತ್ತು ಅದಕ್ಕೆ ಕಾರಣವೆ? ಬ್ರಿಟನ್, ರಶಿಯಾ ಮತ್ತು ಅಮೇರಿಕೆಗಳು ಅಹಿಂಸೆಯಲ್ಲಿ ನಂಬುಗೆ ಇಟ್ಟಿದುದರಿಂದ ವಿಜಯಿಗಳಾದುವೆಂದು ನೀವು ಹೇಳುವಿರೊ?"

ಸುದ್ದಿಗಾರನ ಪ್ರತಿಪಾದನೆಯ ಆಶಯವಿಂತಿದೆ. ಅವನು ಉಲ್ಲೇಖಿಸಿದ ವಾಕ್ಯಗಳಲ್ಲಿ ವಿಜಯೀ ರಾಷ್ಟ್ರಗಳೆಂದು ಹೇಳಿಕೊಳ್ಳುವ ರಾಷ್ಟ್ರಗಳ ಬಗ್ಗೆ ನಾನು ಏನೂ ಹೇಳಿರುವದಿಲ್ಲೆಂಬುದನ್ನು ಈ ಪ್ರಶ್ನೆಗಾರನು ಅರಿತಿಲ್ಲ. ವಿಜಯೀ ರಾಷ್ಟ್ರಗಳು ಇನ್ನೂ ಸಮಯವಿರುವಾಗಲೇ ಪಾಠ ಕಲಿತು ಅಹಿಂಸಾತತ್ವಾನುಸಾರವಾಗಿ ತಮ್ಮ ಜೀವನವನ್ನು ಸರಿಪಡಿಸಿಕೊಳ್ಳದಿದ್ದರೆ ಅವರ ವಿಜಯವೆಲ್ಲ ಬರಿ ಪೊಳ್ಳು ಆಗುವದೆಂದು ನಾನು ಬೇರೆ ಕಡೆಗೆ ಹೇಳಿರುವೆನು. "ಶಸ್ತ್ರಧಾರಿಗಳು ಶಸ್ತ್ರಗಳಿಂದಲೆ ಹತರಾಗುವರು" ಎಂಬ ಸತ್ಯವಾಕ್ಯದಲ್ಲಿ ನನ್ನ ಪೂರ್ಣ ನಂಬಿಕೆಯುಂಟು. ವಿಜಯಿಗಳೂ ಪರಾಜಿತರ ಸಾಧನೆಗಳನ್ನೇ ಉಪಯೋಗಿಸಿದರೆಂಬಲ್ಲಿ ಸಂದೇಹವಿಲ್ಲ. ಆದರೆ ಉಗ್ರತೆಯಲ್ಲಿ ಸ್ವಲ್ಪ ವ್ಯತ್ಯಾಸವಿರಬಹುದು. ವಿಜಯೀ ರಾಷ್ಟ್ರಗಳು ಈಗಾಗಲೆ ಪರಸ್ಪರ ಹೋರಾಟದ ಸಿದ್ಧತೆಯಲ್ಲಿದ್ದಂತೆ ತೋರುತ್ತದೆ. ಮತ್ತೊಂದು ಯುದ್ಧ ಪ್ರಾರಂಭವಾಗದಿರುವುದಕ್ಕೆ ಯಾರೂ ಅದಕ್ಕೆ ಸಿದ್ಧರಿಲ್ಲೆಂಬುದೆ ಕಾರಣ. ಎಷ್ಟಾದರೂ ಮಾನವರೇನು ಯಂತ್ರಗಳಲ್ಲ. ಪಶುವೃತ್ತಿಯನ್ನು ಅವರು ತಾಳಿದರೆ ಮಾತ್ರ ಸತತವಾಗಿ ಹೋರಾಡಬಲ್ಲರು. ಜಗತ್ತಿನಲ್ಲಿಯ ಸಾಮಾನ್ಯ ಮನುಷ್ಯನು ಮತ್ತೊಬ್ಬ ನೆರೆಯವನ ಕುತ್ತಿಗೆ ಕೊಯ್ಯುವದರಿಂದ ಯಾವ ಲಾಭವನ್ನೂ ಪಡೆಯನು. ಯುದ್ಧಕ್ಕಿಂತ ಶಾಂತಿಯ ಫಲಗಳು ನಿಜವಾಗಿ ಶ್ರೇಷ್ಠವಾಗಿವೆ ಎಂಬ ಸತ್ಯ ಸಂಗತಿಯನ್ನು ತಿಳಿದುಕೊಳ್ಳಲು ಅವರು ದೀರ್ಘ ವಿಚಾರಾನಂತರ ಕಂಡು ಹಿಡಿದು ಮಾನವರ ಮೇಲೆ ಮಹದುಪಕಾರ ಮಾಡುವರೆಂದು ನಂಬುವಾ. ವಿನಾಶದ ಉಪಾಯಗಳನ್ನು ಯೋಜಿಸುವುದಕ್ಕಾಗಿ ವ್ಯಯ ಮಾಡಲ್ಪಡುವ ಬುದ್ಧಿಶಕ್ತಿಯು ಮಾನವನನ್ನು ರಸಾತಳಕ್ಕಿಳಿಸುವುದು; ಅದೇ ಬುದ್ಧಿಶಕ್ತಿಯನ್ನು ವಿಧಾಯಕ ಕಾರ್ಯಗಳಿಗಾಗಿ ಉಪಯೋಗಿಸಿದರೆ ಮಾನವೋಚಿತ ಕರ್ತವ್ಯ ಮಾಡಿದಂತಾಗುವದು-

ಹೊಸದಿಲ್ಲಿ ಮೋ. ಕ. ಗಾಂಧಿ

೫-೪-೪೬

## ವನಸ್ಪತಿ ಮತ್ತು ತುಪ್ಪ

ಸರದಾರ ಸರ್ ದಾತಾರಸಿಂಗರು ಹಿಂದುಸ್ತಾನದಲ್ಲಿಯ ಆಕಳು ಪರವಾಗಿ ಹೋರಾಡುತ್ತಿರುವರು. ಆಕಳು ಎಮ್ಮೆಗಳೂ ಸಮಾವಿಷ್ಟವಾಗುತ್ತವೆ. ಹಾಗಾದರೆ ಎರಡೂ ಬದುಕಬಹುದು. ಎಮ್ಮೆಯಲ್ಲಿ ಆಕಳುಗಳ ಸಮಾವೇಶವಾದರೆ ಎರಡೂ ಸಾಯುವವು. "ಗೋ ಸಮೃದ್ಧಿಯ ಮಾತೆ'' ಅದು ಹೇಗೆಂಬುದನ್ನು ತಿಳಿದುಕೊಳ್ಳಲು ಶ್ರೀ ಸತೀಶಚಂದ್ರದಾಸ ಗುಪ್ತರು ಬರೆದ ಮನೋರಂಜಕವಾದ ಎರಡು ಹೊತ್ತಿಗೆಗಳನ್ನು ವಾಚಕರು ಓದತಕ್ಕದ್ದು. ಆದರೆ ವನಸ್ಪತಿಯದೆಂದು ಹೇಳಲ್ಪಡುವ ತುಪ್ಪದಿಂದ ಮುಳುಗಿ ಹೋಗುವ ಗಂಡಾಂತರದಲ್ಲಿರುವ ವಿಶುದ್ಧ ತುಪ್ಪದವಿಷಯವನ್ನಷ್ಟೆ ನಾನಿಲ್ಲಿ ಚರ್ಚಿಸುವೆ. ನಿಜವಾಗಿ ಹೇಳಬೇಕಾದರೆ ವಿಶುದ್ಧ ತುಪ್ಪ ಪ್ರಾಣಿಜನ್ಯವೆ. ವನಸ್ಪತಿಜನ್ಯ ತುಪ್ಪಕ್ಕೆ ವನಸ್ಪತಿ ಎಂದು ಕರೆಯುವದು ಮೂರ್ಖತನ. ಆದರೆ ಆ ಶಬ್ದಗಳೂ ವಿರುದ್ಧಾರ್ಥದ್ದಿವೆ. ೧೯೩೭ ರಲ್ಲಿ ಈ ವನಸ್ಪತಿಯ ವ್ಯಾಪಾರ ೩೬೦೦ ಟನ್ಸ್ ಇದ್ದರೆ ೧೯೪೫ ರಲ್ಲಿ ಅದು ೧೩೭೦೦೦ ಟನ್ನಿಗೇರಿದೆಂದು ಸರದಾರ ದಾತಾರಸಿಂಗರು ಒಳ್ಳೇ ಬೋಧಪ್ರದವಾದ ಟಿಪ್ಪಣಿಕೊಟ್ಟು ಸಿದ್ಧಮಾಡಿದ್ದಾರೆ. ಅಂದರೆ ಈ ಏಳು ವರ್ಷಗಳಲ್ಲಿ ೪೦೦ ಪಟ್ಟು ವ್ಯಾಪಾರ ಹೆಚ್ಚಿದಂತಾಯಿತು. ಇದರ ಪರಿಣಾಮವಾಗಿ ತುಪ್ಪದ ವ್ಯವಸಾಯ ಕಳೆಗುಂದಿದೆ. ಈವಿಷಯವನ್ನು ಸಂಪೂರ್ಣವಾಗಿ ಅಭ್ಯಸಿಸಬೇಕೆನ್ನುವವರು ವರ್ಧಾದಲ್ಲಿ ಇರುವ ಗೋಸೇವಾಸಂಘದಿಂದ ಅಥವಾ ಸರದಾರ ದಾತಾರಸಿಂಗರಿಂದ ಆ ವರದಿಯ ಪ್ರತಿಯನ್ನು ತರಿಸಿಕೊಳ್ಳಬಹುದು. ಸರದಾರರ ಅಭಿಪ್ರಾಯವನ್ನು ಸಂಕ್ಷೇಪತಃ ಕೆಳಗೆ ಕೊಡುತ್ತೇನೆ.

೧) ವನಸ್ಪತಿಯಲ್ಲಿ ಶುದ್ಧ ತುಪ್ಪದ ಸತ್ವವಿಲ್ಲ. ತುಪ್ಪದ ಬದಲು ಅದನ್ನುಪಯೋಗಿಸಲು ಯೋಗ್ಯವಾದ ಪಥ್ಯ ಅದಲ್ಲ. ಮಾನವೀಶರೀರ ಪ್ರಕೃತಿಗೆ ಅವಶ್ಯಕ ಸತ್ವಗಳನ್ನು ಅದು ಕೊಡಲಾರದು.

೨) ರುಚಿ, ರಚನೆ ಮುಂತಾದ್ದರಲ್ಲಿ ತುಪ್ಪದಂತೆಯೆ ಅದು ಕಾಣುವುದರಿಂದ ಅದನ್ನು ತುಪ್ಪವೆಂದೇ ಮಾರುವ ಸಂಭವವಿದೆ. ಇದರಿಂದ ಶುದ್ಧ ತುಪ್ಪಕ್ಕೆ ಬಹಳ ಗಂಡಾಂತರ

೩) ಈ ಉದ್ಯೋಗದಲ್ಲಿ ಬಹಳ ಲಾಭವಿದ್ದುದರಿಂದ ೧೯೩೭ ರಲ್ಲಿ ೩೬ ಸಾವಿರ ಟನ್ ವ್ಯಾಪಾರವಿದ್ದರೆ ೧೯೪೩ ರಲ್ಲಿ ೧೦೫ ಸಾವಿರ ಟನ್ ಆಯಿತು. ಇನ್ನು ಸ್ವಲ್ಪಾವಧಿಯಲ್ಲಿ ಇದರ ಉತ್ಪಾದನೆಯನ್ನು ಕನಿಷ್ಠ ಇಮ್ಮಡಿ ಮಾಡಬೇಕೆಂಬ ಸೂಚನೆಗಳಿವೆ.

೪) ಹಿಂದುಸ್ತಾನದಲ್ಲಿ ತುಪ್ಪದ ವ್ಯವಸಾಯ ಮನೆಮಾರಿಗೆಯ ವ್ಯವಸಾಯದಲ್ಲಿ ಒಳ್ಳೆ ಪ್ರಮುಖವಾದುದು. ಪ್ರತಿವರ್ಷ ೧೦೦ ಕೋಟಿ ರೂಪಾಯಿಗಳಿಂದ ೩೩೦೦೦೦೦೦ ಮಣ ತುಪ್ಪವನ್ನು ಮಾಡಲಾಗುತ್ತದೆ.

೫) ತುಪ್ಪದ ವ್ಯಾಪಾರವು ನಾಶವಾದರೆ ಒಕ್ಕಲಿಗರ ಅಕಲ್ಯಾಣವಾಗುವದೆಂದು ಬೇರೆ ಹೇಳಬೇಕಿಲ್ಲ ಗೋಸಂಪತ್ತಿಯ ಮೇಲೆಯೂ ಇದರ ದುಷ್ಪರಿಣಾಮವಾಗುವದು. ದೇಶದ ಸಂಪತ್ಸಮೃದ್ಧಿ ಗೋಸಂಪತ್ತಿಯನ್ನೆ ನೇರವಾಗಿ ಅವಲಂಬಿಸುತ್ತಿದೆಂಬುದು ಸರ್ವಶ್ರುತ.

ಮೇಲೆ ವಿವರಿಸಿದ ಅಡಚಣೆಗಳನ್ನು ನಿವಾರಿಸುವದಕ್ಕಾಗಿ ಕೆಳಗಿನ ಉಪಾಯಗಳನ್ನು ಸೂಚಿಸಲಾಗಿದೆ.

೧) ವನಸ್ಪತಿಯ ತುಪ್ಪವನ್ನು ಸಿದ್ಧಪಡಿಸಬಾರದೆಂದು ವಿಧಿಸಲು ಯಾವದೇ ಕಾರಣಕ್ಕಾಗಿ

—೧೦ನೇ ಪುಟ ನೋಡಿರಿ

# ಪ್ರಶ್ನೆ—ಪೆಟ್ಟಿಗೆ

ಪ್ರಶ್ನೆ — ಮಾನವನ ಮನಸಿನಲ್ಲಿಯೇ ಪರಮಾತ್ಮನ ಸೃಷ್ಟಿ. ಪರಮಾತ್ಮನು ಮಾನವನನ್ನು ಹುಟ್ಟಿಸಿಲ್ಲ. ಆದರೆ ಮಾನವನೆ ಪರಮಾತ್ಮನನ್ನು ಸೃಷ್ಟಿಸಿರುವನು. ಇದು ಸತ್ಯವಲ್ಲವೆ ?

ಉತ್ತರ— ಸುದ್ದಿಗಾರನೊಬ್ಬನು ಬರೆದ ಪತ್ರದಿಂದ ನಾನಿದನ್ನು ಉಲ್ಲೇಖಿಸುತ್ತೇನೆ. ಅವನ ಹೇಳಿಕೆಯಲ್ಲಿ ಸತ್ಯದ ಆಭಾಸವಿದೆ. ಆದರೆ ಸೃಷ್ಟಿ ಮತ್ತು ಪರಮಾತ್ಮ ಈ ಎರಡು ಶಬ್ದಗಳ ಶ್ಲೇಷ ಮಾಡಿ ಅವನು ಸಂದೇಹಕ್ಕೊಳಗಾಗಿರುವನು. ಪರಮಾತ್ಮನು ಸ್ವತಃ ಶಾಸ್ತ್ರ ಮತ್ತು ಶಾಸಕ ಆದುದರಿಂದ ಯಾರೊಬ್ಬರು ಅವನನ್ನು ಹುಟ್ಟಿಸಿರುವರೆಂಬ ಪ್ರಶ್ನೆಯೇ ಉದ್ಭವಿಸುವದಿಲ್ಲ. ಅದರಲ್ಲಿಯೂ ಯಃಕಶ್ಚಿತ ಮಾನವನ ಪಾಡೇನು ? ಮಾನವನು ಆಣೆಕಟ್ಟು ಹಾಕಬಲ್ಲನು, ಆದರೆ ನದಿಯನ್ನು ಸೃಷ್ಟಿಸಲಾರ. ಅವನು ಕುರ್ಚಿಯನ್ನು ಸಿದ್ಧ ಮಾಡಬಲ್ಲನು ಆದರೆ ಕಟ್ಟಿಗೆಯನ್ನು ಸಿದ್ಧ ಮಾಡುವದು ಅವನ ಶಕ್ತಿಗೆ ನಿಲುಕದ ಮಾತು ಅವನು ತನ್ನ ಹೃದಯಾಂತರಾಳದಲ್ಲಿ ಪರಮಾತ್ಮನ ಚಿತ್ರವನ್ನು ತೆಗೆಯಬಲ್ಲ. ಆದರೆ ನದಿ ಇಲ್ಲವೆ ಕಟ್ಟಿಗೆಯಂಥ ಪದಾರ್ಥಗಳನ್ನು ನಿರ್ಮಿಸಲಾರದ ಮನುಷ್ಯ ಪರಮಾತ್ಮನನ್ನೆಂತು ಸೃಷ್ಟಿಸಬಲ್ಲ ? ಆದುದರಿಂದ ಪರಮಾತ್ಮನೆ ಮಾನವನ ಸೃಷ್ಟಿಕರ್ತ ಎಂಬುದು ಅಬಾಧಿತ ಸತ್ಯ. ಮಾನವನು ಈಶ್ವರನನ್ನು ಹುಟ್ಟಿಸಿದನೆಂಬುದು ಕೇವಲ ಆಭಾಸ ಈಶ್ವರನಂತೂ ಸ್ವತಃ ಏನೂ ಮಾಡುವದಿಲ್ಲ ಇಲ್ಲವೆ ಮಾಡಿಸುವದಿಲ್ಲ ಎಂದು ಬೇಕಾದವರು ಹೇಳಬಹುದು. ಇವೆರಡೂ ವಚನಗಳು ಈಶ್ವರನಿಗೇ ಅನ್ವಯಿಸುವವು.

ಹೊಸದಿಲ್ಲಿ — ಮೋ. ಕ. ಗಾಂಧಿ

೬-೪-೪೬

(ಹರಿಜನ ಬಂಧುವಿನಿಂದ)

ಪ್ರಶ್ನೆ:- ಚುನಾಯಿತ ಸಂಸ್ಥೆಗಳಲ್ಲಿ ಹೆಣ್ಣುಮಕ್ಕಳನ್ನು ಹೆಚ್ಚು ಪ್ರಮಾಣದಲ್ಲಿ ಆರಿಸಿ ತರಲು ಕಾಂಗ್ರೆಸ್ಸು ಒಪ್ಪುವುದಿಲ್ಲೆಂದು ನನಗೆ ಕಂಡು ಬಂದಿದೆ. ಆಯಾ ಸಂಸ್ಥೆಗಳಲ್ಲಿ ಹೆಚ್ಚು ಹೆಣ್ಣುಮಕ್ಕಳನ್ನು ಸೇರಿಸಿಕೊಳ್ಳುವುದು ಅವಶ್ಯಕ ಮತ್ತು ನ್ಯಾಯ್ಯವಾಗಿದೆಂಬುದು ನಿಃಸಂಶಯವಾಗಿದೆ. ಈ ಪ್ರಶ್ನೆಯನ್ನು ನೀವೆಂತು ಬಿಡಿಸುವಿರಿ ?

ಉತ್ತರ:- ಇಂಥ ವಿಷಯಗಳಲ್ಲಿಸಮತೆ ಇಲ್ಲವೆ ಬೇರೆ ಯಾವದೇ ಪ್ರಮಾಣ ನನಗಷ್ಟೊಂದು ಆಕರ್ಷಕವಾಗಿಲ್ಲ. ಇದಕ್ಕೆಲ್ಲ ಗುಣವೆ ಮುಖ್ಯ ಒರೆಗಲ್ಲು. ಆದರೆ ಹೆಣ್ಣುಮಕ್ಕಳನ್ನು ಹಿನ್ನೂಕುವುದೊಂದು ರೂಢಿಯೆ ಆಗಿಬಿಟ್ಟದ್ದರಿಂದ ಸಮಾನ ಯೋಗ್ಯತೆಯ ಹೆಣ್ಣುಮಕ್ಕಳಿಗೆ ಯಾವಾಗಲೂ ಪ್ರಾಶಸ್ತ್ಯ ಕೊಡಬೇಕಾಗಿದೆ. ಹೀಗೆ ಮಾಡುವಾಗ ಕೆಲ ಸಂದರ್ಭಗಳಲ್ಲಿ ಗಂಡಸರ ಸ್ಥಳದಲ್ಲಿ ಹೆಣ್ಣುಮಕ್ಕಳೆ ಆರಿಸಿ ಬರುವ ಪ್ರಸಂಗ ಬಂದರೂ ಅವರಿಗೆ ಪ್ರಾಶಸ್ತ್ಯ ಕೊಡತಕ್ಕದ್ದು. ಆದರೆ ಕೇವಲ ಹೆಣ್ಣುಮಕ್ಕಳೆಂದು ಅವರನ್ನು ಆರಿಸಿ ತರಬೇಕೆಂದು ಒತ್ತಾಯ ಪಡಿಸುವದು ಅಪಾಯಕರವಾಗಬಹುದು. ಹೆಣ್ಣುಮಕ್ಕಳು ಇಲ್ಲವೆ ಅದೇ ರೀತಿ ಬೇರೆ ಗುಂಪಿನವರು ಯಾವದೇ ಬಗೆಯ ಅನುಗ್ರಹದಿಂದ ಅಲಿಪ್ತರಾಗಿರತಕ್ಕದ್ದು. ನ್ಯಾಯವನ್ನೆ ಅವರು ಅಪೇಕ್ಷಿಸಬೇಕಲ್ಲದೆ ಅನುಗ್ರಹವನ್ನಲ್ಲ. ಆದುದರಿಂದ ಹೆಣ್ಣುಮಕ್ಕಳು ಮತ್ತು ಗಂಡಸರು ಕೂಡ ನಾಗರಿಕತೆಯ ಅನೇಕ ಕಾರ್ಯಗಳನ್ನು ಮಾಡುವ ಯೋಗ್ಯತೆ ಪಡೆಯಲು ಪ್ರಾಂತಿಕ ಭಾಷೆಗಳ ಮುಖಾಂತರ ತಮ್ಮಲ್ಲಿ ಸಾಮಾನ್ಯ ಶಿಕ್ಷಣದ ಪ್ರಚಾರ ಮಾಡಬೇಕು. ಅಂದರೆ ಇಂಗ್ಲಿಷ ಮತ್ತು ಪಾಶ್ಚಾತ್ಯ ಶಿಕ್ಷಣದ ಪ್ರಚಾರ ಮಾತ್ರ ಮಾಡಕೂಡದು. ಗಂಡಸರು ಅತ್ಯವಶ್ಯವಾದ ಈ ಸುಧಾರಣೆಯನ್ನು ಮಾಡಲು ಮುಂದಾಗಬೇಕು. ಆದರೆ ಹೆಣ್ಣುಮಕ್ಕಳ ಮೇಲೆ ಅನುಗ್ರಹ ಮಾಡುವ ಬುದ್ಧಿಯಿಂದಲ್ಲ. ಹಿಂದೆಯೆ ಅವರಿಗೆ ಸಲ್ಲಬೇಕಾಗಿದ್ದ ನ್ಯಾಯ್ಯ ಕಾರ್ಯವೆಂದು ಅವರು ಇದನ್ನು ಮಾಡತಕ್ಕದ್ದು.

ಉರುಳಿ — ಮೋ. ಕ. ಗಾಂಧಿ

೩೦-೩-೪೬

# ಕ್ರಿಶ್ಚನರೂ ರಾಜಕಾರಣವೂ

ನಾವು ಕ್ರಿಶ್ಚನರು ಎಂದು ಹೇಳಿಕೊಂಡರೆ ನಮ್ಮ ಜೀವನದ ಪ್ರತಿಯೊಂದು ರೀತಿನೀತಿಗಳಲ್ಲಿಯೂ ಯೇಸುವಿನ ತತ್ವಗಳನ್ನೆ ಅನುಸರಿಸಬೇಕು. ರಾಜಕಾರಣವು ನಮ್ಮ ಸಾಮಾಜಿಕ ಸಂಬಂಧಗಳ ಒಂದೇ ಒಂದಾದ ಸ್ವರೂಪವಾಗಿರುವದರಿಂದ ನಾವು ರಾಜಕಾರಣವನ್ನು ಪ್ರವೇಶಿಸಿದರೆ ಅಲ್ಲಿಯೂ ಈ ತತ್ವಗಳನು ಪ್ರಯೋಗಿಸಬೇಕು. ಅದ್ದರಿಂದ ಈ ಬಗ್ಗೆ ಯೇಸುವಿನ ಧೋರಣೆ ಏನೆಂಬದನ್ನು ಅರಿತುಕೊಳ್ಳುವಾ.

ಅವನ ಉಪದೇಶಗಳ ಪ್ರಾರಂಭದಲ್ಲಿಯೇ ಅವನೆದುರಿಸಬೇಕಾಗಿ ಬಂದ ಸೆಳೆತಗಳ ಪಟ್ಟಿಯೊಂದಿದೆ. ಯೇಸುವಿನ ಬಗೆಯನ್ನರಿತುಕೊಳ್ಳಲು ಇವು ಸಹಾಯಕವಾಗುವವು.

ಒಮ್ಮೆ ೪೦ ದಿನಗಳ ಉಪವಾಸದ ನಂತರ ಅವನು ಬಹಳ ಹಸಿದಿದ್ದನು. ಕಲ್ಲುಗಳನು ಪವಾಡದಿಂದ ರೊಟ್ಟಿಗಳನ್ನಾಗಿ ಮಾರ್ಪಡಿಸಬೇಕೆಂಬ ಸೆಳೆತ ಹುಟ್ಟಿತು. ಆದರೆ ರೊಟ್ಟಿಯೊಂದನ್ನೆ ತಿಂದು ಮಾನವನು ಬದುಕುವದಿಲ್ಲವೆಂದು ಅವನು ಆ ವಿಚಾರವನ್ನು ತ್ಯಜಿಸಿಬಿಟ್ಟನು. ಹೊಟ್ಟೆ ಹೊರೆಕೊಳ್ಳುವ ಉದ್ದೇಶದಿಂದ ನಾವು ರಾಜಕಾರಣವನ್ನು ಸೇರಲಿಚ್ಛಿಸುತ್ತೇವೆಯೆ ? ಯೇಸುವಿನ ಅನುಯಾಯಿಗಳಿಗೆ ಇದೊಂದು ತೀರ ಕ್ಷುಲ್ಲಕ ಗುರಿ.

ದೇವದೂತರು ನಿನ್ನನ್ನು ಕಾಪಾಡುವರಾದ್ದರಿಂದ ನೀನು ಈ ಗೋಪುರದ ಮೇಲಿಂದ ಕೆಳಕ್ಕೆ ಹಾರಬೇಕೆಂದು ಅವನಿಗೊಮ್ಮೆ ಹೇಳಲಾಯಿತು. ನಮ್ಮ ವಾಕ್ಶಕ್ತಿ, ವೈಯಕ್ತಿಕ ಪ್ರತಿಭೆಗಳನ್ನು ಮೆರೆಸುವದಕ್ಕಾಗಿ ನಾವು ಶಾಸನ ಸಭೆಗಳನ್ನು ಸೇರುವೆವೆ? ನಮ್ಮ ಗೌರವ ಬೆಳೆಸಿಕೊಳ್ಳಲು ದೇವರು ನಮಗೆ ಈ ಶಕ್ತಿಗಳನ್ನು ದಯಪಾಲಿಸಿರುವದಿಲ್ಲ.

ಯೇಸುವು ಭ್ರಷ್ಟನಾಗಿ ತನ್ನನ್ನು ಆರಾಧಿಸಿದರೆ ಇಡೀ ಜಗತ್ತನ್ನೇ ಅವನಿಗೆ ಅರ್ಪಿಸಿಬಿಡುವದಾಗಿ ಸೈತಾನನು ಅವನಿಗೆ ಹೇಳಿದನು. ರಾಜಕಾರಣದಲ್ಲಿ ಹೀಗೆ ಹೇಳುವದೆಂದರೆ—ನಮ್ಮ ಸಹಬಾಂಧವರ ಮೇಲೆ ಅಧಿಕಾರ ಪಡೆದುಕೊಂಡಂತೆ. ನೆರೆಹೊರೆಯವರ ಮೇಲೆ ನಮ್ಮ ಅಧಿಕಾರ ನಡೆಸುವದಕ್ಕಾಗಿ ನಾವು ಮಂತ್ರಿಗಳಾಗಬೇಕೆ ? ಇದು ಯೇಸುವಿನ ದಾರಿಯಲ್ಲ.

ದೇವರ ಈ ಸೇವೆ ಯಾವುದು ? 'ನಾನು ಹಸಿದಾಗ ನೀನು ಉಣಬಡಿಸಿದೆ; ನಾನು ಬತ್ತಲೆ ಇದ್ದಾಗ ನೀನು ಬಟ್ಟೆ ಕೊಟ್ಟೆ; ಕಾಯಿಲೆಯಿಂದಿದ್ದಾಗ ನೀನು ಭೆಟ್ಟಿಕೊಟ್ಟೆ" "ಇವರಲ್ಲಿಯ ತೀರ ಪಾಮರನ ಸೇವೆ ಮಾಡಿದಂತೆ ನನಗೂ ಸೇವೆ ಮಾಡಿರುವೆ" ಒಳಿತನ್ನೆಸಗುತ್ತ ಸಂಚರಿಸುವ ಅವನ ಅನುಯಾಯಿಗಳೆಲ್ಲರಿಗೂ ಇದು ಯೋಗ್ಯ ಕ್ಷೇತ್ರವಾಗಿದೆ. ಅವನ ಇಡೀ ಜೀವನವು ಮಾನವನ ಹಕ್ಕುಬಾಧ್ಯತೆಗಳನ್ನಲ್ಲ ಆದರೆ ನೆರೆಹೊರೆಯವರಿಗೆ ತನ್ನ ಕರ್ತವ್ಯವನ್ನೇ ಆಧರಿಸಿತ್ತು. ಇಂಥ ನಿಷ್ಠೆಯನ್ನೊಪ್ಪಿಕೊಂಡ ನಾವು ನಮ್ಮ ಹಕ್ಕುಬಾಧ್ಯತೆಗಳನ್ನು ಸೌಕರ್ಯಗಳನ್ನು ಸಂಪಾದಿಸುವದಕ್ಕಾಗಿ ಒಂದು ಪಂಥವನ್ನು ಕಟ್ಟಿಕೊಳ್ಳಬಲ್ಲವೆ ? ಇವುಗಳ ಬೆನ್ನು ಹತ್ತುವದೆಂದರೆ ದೇವರ ಅಸ್ತಿತ್ವವನ್ನು ನಿರಾಕರಿಸಿದಂತಲ್ಲವೆ ? ಎಂಥವನೆ ಸಂಕಟದಲ್ಲಿದ್ದರೂ ಅವನಿಗೆ ನೆರವಾಗುವುದು ನಮ್ಮ ಕರ್ತವ್ಯವೆಂದು ಸಾಧು ಸಮಾರೀಟನನ ಕತೆಯಿಂದ ಯೇಸುವು ನಮಗೆ ಪಾಠ ಕಲಿಸಿಲ್ಲವೆ ? ಒಬ್ಬನು ಕಳ್ಳರ ಕೈಗೆ ಸಿಕ್ಕು ಎಲ್ಲವನ್ನು ಕಳೆದುಕೊಂಡು ಗಾಯಗೊಂಡು ಬಿದ್ದಾಗ ಧರ್ಮೋಪದೇಶಕನೂ ಅವನ ಶಿಷ್ಯನೂ ಗಾಯಾಳುವನ್ನು ಗಮನಿಸದೆ ಹಾಗೇ ಮುಂದೆ ಹೋದರು ಆದರೆ ತಿರಸ್ಕೃತ ಸಮಾರಿಟನನು ಗಾಯಾಳನ್ನು ಉಪಚರಿಸಿದನು ನಾವೂ ಅವನಂತೆ ಮಾಡಲಾರೆವೆ ?

ಜನರು ಜಾತಿಗಳ ಸಂಬಂಧಗಳನ್ನು ರಾಜಕಾರಣಕ್ಕೆ ಜೋಡಿಸಿ ಮಾತಾಡುತ್ತಿರುವಾಗ ತಮ್ಮ ಹಿತ ಸಂಬಂಧಗಳನ್ನು ರಕ್ಷಿಸುವದಕ್ಕಾಗಿ ಅಧಿಕಾರವನ್ನು ಸಂಪಾದಿಸುವದಕ್ಕಾಗಿ ಹೇಳುತ್ತಿರುತ್ತಾರೆ. ಇದು ಯೇಸುವಿನ ತತ್ವಗಳ ತೀರ ವಿರೋಧಿಯಾದದ್ದು. ಕ್ರಿಶ್ಚನ್ ತತ್ವಕ್ಕೆ ಒಪ್ಪದಂಥದು.

ಈಗ ಕೆಲ ದಿನಗಳ ಹಿಂದೆ ಹಿಂದೀ ಕ್ರಿಶ್ಚನರ ಶಿಷ್ಟಮಂಡಳವೊಂದು ತಮ್ಮ ಹೇಳಿಕೆ ಕೊಡುವುದಕ್ಕಾಗಿ ಬ್ರಿಟಿಶ್ ಪಾರ್ಲಿಮೆಂಟರಿ ನಿಯೋಗದವರನ್ನು ಕಂಡಿತ್ತು. ತಾನು ಬಿರುನುಡಿಗಳನ್ನಾಡಿಸಿಕೊಂಡರೂ ತಿರುಗಿ ಒಂದು ಶಬ್ದವನ್ನುಚ್ಚರಿಸದ 'ಪ್ರಭು'ವಿನಿಂದ ನಾವೆಷ್ಟು ದೂರ ಹೋಗಿದ್ದೇವೆ ತಾನು ಸಂಕಟದಲ್ಲಿದ್ದರೂ ಅವರು ತಿರುಗಿ ಹೆದರಿಸುತ್ತಿರಲಿಲ್ಲ.

ಇನ್ನೊಮ್ಮೆ ಬೇರೆ ಕೆಲವು ಜಾತೀಯ ಮುಖಂಡರು ಹಿಂದೀ ಕ್ರಿಶ್ಚನ ದಳವೊಂದನ್ನು ಸ್ಥಾಪಿಸಬೇಕೆಂದು ವ್ಹಾಯಿಸರಾಯರನ್ನು ಕಂಡರು. ಇದರ ದುಷ್ಟಸ್ವರೂಪವನ್ನು ನಾವರಿತಿರುವೆವೆ ? ನಿರ್ದಯದಿಂದ ಕೊಲೆಗೊಯ್ಯುವ ವೃತ್ತಿಯನ್ನು ಕಲಿಯಲಿಚ್ಛಿಸುತ್ತೇವೆ ಆದರೆ ಒಂದು ಕೆನ್ನೆಗೆ ಬಿಗಿದರೆ ಇನ್ನೊಂದನ್ನು ತೋರಿಸು ಎಂದು ಹೇಳಿದ ಶಾಂತಶಿಖಾಮಣಿಯ ಹೆಸರಿನಲ್ಲಿ ಮೆರೆಯಲಿಚ್ಛಿಸುತ್ತೇವೆ ನಾವು ಇದುವರೆಗೆ ನೋಡದೆ ಇದ್ದವರನ್ನು ನಮಗೆ ಯಾವ ರೀತಿಯಲ್ಲಿಯೂ ಅಪಾಯ ಮಾಡದಿದ್ದವರನ್ನು ಕೊಲ್ಲುವದನ್ನು ಕಲಿಸಿರಿ ಎಂದು ನಾವು ಸರಕಾರಕ್ಕೆ ಬಿನ್ನವಿಸಿಕೊಳ್ಳುತ್ತಿದ್ದೇವೆ.

ಕೊಲೆಗಡಕರ ಪಡೆಯಲ್ಲಿ, ಅಲಂಕಾರಿಕವಾಗಿ ಹೇಳಿದರೆ ಸೈನ್ಯದಲ್ಲಿ ಈ ಜಾತಿಯವರನ್ನು ಬೇಕಾದಷ್ಟು ಸೇರಿಸಿಕೊಳ್ಳುತ್ತಿರುವದೂ ಒಂದು ದೈವವಿಲಾಸವೆ ! ಇವರಲ್ಲಿಯ ಸ್ತ್ರೀಯರನ್ನು ಸಹ ಅವರ ಸ್ವಭಾವಸಹಜವಾದ ನಯವನ್ನು ಲೆಕ್ಕಿಸದೆ ಸಹಾಯಕ ದಳದಲ್ಲಿ ಸೇರಲು ಮನವೊಲಿಸಲಾಗುತ್ತಿದೆ. ಇವೆಲ್ಲ ಲೌಕಿಕ ವಸ್ತುಗಳ ಬಗ್ಗೆ ನಮ್ಮಲ್ಲಿದ್ದ ಅನ್ಯಾಯದ ಆಕಾಂಕ್ಷೆಯನ್ನು ವ್ಯಕ್ತಪಡಿಸುವದಿಲ್ಲವೆ ! ನಾವು ಆರಾಧಿಸುವ ಪ್ರಭುವಿಗೆ ತಲೆಯಿಡಲೂ ಸ್ಥಳ ದೊರೆಯಲಿಲ್ಲವೆಂಬುದನ್ನು ಮರೆಯದಿರೋಣ ಅವನನ್ನು ನಡೆಸಿಕೊಂಡ ರೀತಿಗಿಂತಲೂ ಒಳ್ಳೆಯ ರೀತಿಯಲ್ಲಿ ನಮ್ಮನ್ನು ನಡೆಸಿಕೊಳ್ಳಲಾಗುವದೆಂದು ನಾವು ಹೇಗೆ ಆಶಿಸಬಹುದು? ಅವನು ಶಿಲುಬೆಯ ಮೇಲೆ ಜೀವ ಬಿಟ್ಟನು ಅವನ ಕಿರೀಟವು ಮುಳ್ಳಿನದಾಗಿತ್ತು. ಅವನ ಅನುಭವವನ್ನು ಪಡೆಯಲು ನಾವು ಸಿದ್ಧರಿರುವೆವೆ? ಅಥವಾ ನಮ್ಮ ಅಮರ್ಯಾದಿತ ಸ್ವೇಚ್ಛೆಗೆ ಅವಕಾಶ ದೊರಕಿಸಿಕೊಡುವದಕ್ಕಾಗಿ ಅವನು ಕಟು ಅನುಭವವನ್ನು ಪಡೆದನೆಂದು ಭಾವಿಸೋಣವೆ ?

ಜನರಿಂದ ಗೌರವ ಪಡೆಯಲೆಂದು ನಾವು ರಾಜಕಾರಣವನ್ನು ಪ್ರವೇಶಿಸಲಿಚ್ಛಿಸುತ್ತೇವೆಯೆ ? ಲೌಕಿಕರು ಇತರರ ಮೇಲೆ ಅಧಿಕಾರ ನಡೆಸುವ ಅಪೇಕ್ಷೆಯುಳ್ಳವರಾಗಿರುತ್ತಾರೆ. ಆದರೆ ನಮ್ಮಲ್ಲಿ ಆ ಬುದ್ಧಿ ಇರಬಾರದು. ಎಂಥ ನಾಯಕನೂ ಜನರ ಸೇವಕನಾಗಲೇಬೇಕು. ತಾನು ಉಪಚಾರ ಪಡೆಯಲಿಕ್ಕೆ ಬಂದವನಲ್ಲ, ಇತರರನ್ನು ಉಪಚರಿಸಿ ಅವರಿಗಾಗಿ ಜೀವವನ್ನು ತೆರಲು ಬಂದವನೆಂದು ಯೇಸುವು ಹೇಳಿಕೊಂಡಿದ್ದಾನೆ. ನಾವು ಸ್ಪರ್ಧಿಸುವದೆ ಆದರೆ ಇತರರಿಗೆ ಸೇವೆ ಸಲ್ಲಿಸುವಲ್ಲಿ ಸ್ಪರ್ಧಿಸೋಣ. ನಮ್ಮ ಪ್ರಾಣಗಳನ್ನು ಜನತೆಯ ಸೇವೆಗಾಗಿ ಮೀಸಲಾಗಿಟ್ಟು ಅವರ ಪ್ರೀತ್ಯಾದರಗಳನ್ನು ಗಳಿಸೋಣ. ಅಧಿಕಾರ, ಸೌಕರ್ಯಗಳ ನಮ್ಮ ಈ ಯಾಚನಾ ವೃತ್ತಿಯನ್ನು ಬಿಟ್ಟು ಬಿಡೋಣ.

ಯೇಸುವು ಸೇವಕರ ಜಾತಿಯೊಂದನ್ನೇ ಮನ್ನಿಸುತ್ತಾನೆ. ದೇವರ ಇಚ್ಛೆಯನ್ನು ನಡೆಸುವವನೆ ನನಗೆ ಬಂಧು ಬಳಗ, ಆಪ್ತೇಷ್ಟರು ಎಲ್ಲರೂ ಆಗಿರುತ್ತಾನೆ. ಪ್ರಭುವು ಹೀಗೆ ಹೇಳುತ್ತಾನೆ—— "ಯಾರಾದರೂ ನನ್ನನ್ನು ಅನುಸರಿಸಬಯಸಿದರೆ ಅಹಂಭಾವವನ್ನು ಬಿಟ್ಟುಗೊಟ್ಟು ಕ್ರಾಸನ್ನು ಹಿಡಿದುಕೊಂಡು ನನ್ನನ್ನನುಸರಿಸಲಿ. ಪ್ರಾಣವುಳಿಸಿಕೊಳ್ಳಲೆತ್ನಿಸುವವನು ಅದನ್ನು ಕಳೆದುಕೊಳ್ಳುತ್ತಾನೆ. ನನಗಾಗಿ ಪ್ರಾಣವನ್ನು ನೀಡಲು ಸಿದ್ಧನಾದವನು ಅದನ್ನು ದೊರಕಿಸುತ್ತಾನೆ.'' ಈ ಕಡೆಗೆ ನಾವು ಓಗೊಡಲಾರೆವೆ ?

ಜೆ. ಸಿ. ಕುಮಾರಪ್ಪ

# ಹೆಸರಿನಲ್ಲಿ ಏನಿದೆ ?

ಪ್ರಶ್ನೆ- 'ಹರಿಜನ' ಎಂಬ ಹೆಸರು ಎಷ್ಟೇ ಪವಿತ್ರವಾಗಿದ್ದರೂ ಯಾರ ಬಗ್ಗೆ ಅದನ್ನು ಪಯೋಗಿಸಲಾಗಿರುವದೊ ಆ ಜನರ ಮನಸ್ಸಿನಲ್ಲಿ ಒಂದು ಬಗೆಯ ಕೀಳ ಭಾವನೆಯನ್ನುಂಟು ಮಾಡುತಿರುವದೆಂದು ಮಾನಸಶಾಸ್ತ್ರ ದೃಷ್ಟಿಯಿಂದ ವಿಚಾರ ಮಾಡಿದರೆ ಎನಿಸುವದೆಂದು ನನ್ನ ಅಭಿಪ್ರಾಯ ಅವರೆಷ್ಟೇ ಪ್ರಗತಿಯನ್ನು ಹೊಂದಿದರೂ ಅವರನ್ನು ಯಾವಾಗಲೂ 'ಹರಿಜನ' ಎಂದು ಕರೆದರೆ [illegible] ಭಾವನೆಯನ್ನು ಅವರ ತಲೆಯಿಂದ ಹೋಗಲಾಡಿಸುವದು ಕಠಿನವೆನಿಸುವದು. ಅದೇ ರೀತಿ 'ಹರಿಜನ'ರ ಬಗ್ಗೆ ದಾರಿಹೋಕನಿಗೆ ಕೇಳಿದರು ಕೂಡ ಅಸ್ಪೃಶ್ಯತೆ ಮತ್ತು ದಲಿತವರ್ಗ ಎಂಬದರ ಬಗ್ಗೆಯೆ ಅವನು ಮೊದಲು ಮಾತಾಡುವನು. ಆದುದರಿಂದ 'ಹರಿಜನ'ರು ಇಂಥ ಕನಿಷ್ಠ ಭಾವನೆಯನ್ನು ತಾಳದಂತೆ ಮತ್ತು ಉಳಿದವರು, ಅವರ ಬಗ್ಗೆ ಅಂಥ 'ವಿಶೇಷಣ'ಗಳನ್ನು ಹಚ್ಚಿ ಕರಿಯುವದನ್ನು ತಪ್ಪಿಸುವದು ಶಕ್ಯವಾಗಲಾರದೊ ? ಉಳಿದ ಜಾತಿಯ ಜನರನ್ನೂ ಅಳವಡಿಸಿಕೊಳ್ಳುವಂಥ ಯಾವದೊಂದು ಹೆಸರು ಆರಿಸುವದು ಯೋಗ್ಯವಲ್ಲವೆ ?

ಉತ್ತರ-ಹಲವು ವರುಷಗಳ ಹಿಂದೆಯೆ 'ಯಂಗ ಇಂಡಿಯಾ ' ದಲ್ಲಿ ಈ ವಿಷಯದ ಚರ್ಚೆ ಮಾಡಿದ್ದಾಗಿದೆ. 'ಹರಿಜನ' ಹೆಸರು ಪವಿತ್ರವಾಗಿದೆ. ಅಸ್ಪೃಶ್ಯರು ದಲಿತವರು ಇಲ್ಲವೆ ಅವರಲ್ಲಿಯ ಭಂಗಿ, ಮಹಾರ ಎಂಬ ಚಮಾರ, ಪಾರಿಶಾ ಮೊದಲಾದ ವಿವಿಧ ಉಪಜಾತಿಯವರ ಸಲುವಾಗಿ ಈ ಹೆಸರನ್ನು ಒಬ್ಬ 'ಹರಿಜನ'ರೆ ಸೂಚಿಸಿದ್ದರು. ಸರಕಾರದವರು ಅವರನ್ನು ಒಂದು ಪರಿಶಿಷ್ಟವರ್ಗದಲ್ಲಿ ಸೇರಿಸಿದ್ದರು ಮತ್ತು ಅದರಿಂದ ಅವರನ್ನು ಪರಿಶಿಷ್ಟ ವರ್ಗದವರೆಂದು ಕರೆಯಹತ್ತಿದರು. ಇದರಿಂದ ಮತ್ತಷ್ಟು ಗೊಂದಲವುಂಟಾಯಿತು. ಅಸ್ಪೃಶ್ಯರಲ್ಲದವರನ್ನು ಕೂಡ ಪರಿಶಿಷ್ಟವರ್ಗದಲ್ಲಿ ಸೇರಿಸಿಕೊಳ್ಳಲಿಕ್ಕೆ ಲುಬ್ಧರಾಗುವ ಪರಿಸ್ಥಿತಿಗೆ ನಾವೀಗ ಬಂದು ಮುಟ್ಟಿರುವೆವು. ಇದಕ್ಕಾಗಿ ಸರಕಾರಕ್ಕೆ ಅಭಿನಂದನೆಗಳು! ಎಲ್ಲ ಚುನಾಯಿತ ಸಂಸ್ಥೆಗಳಲ್ಲಿ ಸ್ಥಳಗಳಿಗಾಗಿ ಹೋರಾಡುವವರ ಬಗ್ಗೆ ಪ್ರತ್ಯೇಕ ಮತದಾರ ಸಂಘಗಳನ್ನು ಸರಕಾರದವರು ಕಲ್ಪಿಸಿರುವರು. ಅದರ ಜೊತೆಪ್ರಾಮಾಣಿಕಯೋಗ್ಯತೆಯಿದ್ದರೆ ಅದಕ್ಕೆ ನನ್ನದೇನೂ ಆಕ್ಷೇಪವಿಲ್ಲ. ಆದರೆ ಯೋಗ್ಯತೆಯನ್ನನುಲಕ್ಷಿಸದೆ ಸ್ಥಳಗಳಿಗಾಗಿ ಆಸೆಪಡುವುದೆಂದರೆ ನಿಜವಾಗಿಯೂ ಅಪಾಯಕರವಾದುದು. ಉಚ್ಚ ಶಿಕ್ಷಣ ಪಡೆದು ಅತ್ಯುನ್ನತ ಸ್ಥಳದ ಸಲುವಾಗಿ ತರಬೇತಿ ಹೊಂದಿದರೆ ಅದೊಂದು ಪ್ರಶಂಸನೀಯ ಮತ್ತು ಪ್ರೋತ್ಸಾಹಕರ ಸಂಗತಿಯಾಗಬಹುದು. ಆದರೆ ಇಂಥದೊಂದು ಜಾತಿಯಲ್ಲಿ ಇಲ್ಲವೆ ವರ್ಗದಲ್ಲಿ ಹುಟ್ಟಿದ್ದೇನೆಂದು ಹೇಳಿ ಉನ್ನತ ಸ್ಥಾನಕ್ಕಾಗಿ ಹಪಾಪಿಸುವದು ನಿಷೇಧಾರ್ಹವಾಗಿದ್ದು ಇದನ್ನು ನಿರುತ್ಸಾಹಗೊಳಿಸಬೇಕಾಗಿದೆ.

ಇದಕ್ಕೆ ನಿಜವಾದ ಉಪಾಯವನ್ನು ನಾನು ಸೂಚಿಸಿದ್ದೇನೆ. ಕೀಳ ಭಾವನೆಯೆ ಮಾಯವಾಗಬೇಕು; ಅದು ಮಾಯವಾಗುತಿದೆ ಆದರೆ ಬಹಳ ಮಂದಗತಿಯಿಂದ. ಪ್ರತಿಯೊಬ್ಬ ಹಿಂದುವು ತನ್ನ ಶ್ರೇಷ್ಠ ಭಾವನೆಯನ್ನು ಬಿಟ್ಟುಗೊಟ್ಟು ಸ್ವಯಂ ಹರಿಜನ ಅಷ್ಟೆ ಏಕೆ ಅವರಲ್ಲಿಯೆ ಕನಿಷ್ಠ ಜಾತಿಯ ಮಹಾರರಾದರೆ; ಬಹಳ ವೇಗದಿಂದ ಇದು ಕಾರ್ಯಕಾರಿಯಾಗುವದು. ಅನಂತರ ನಾವೆಲ್ಲ ನಿಜವಾಗಿ ಪರಮಾತ್ಮನ ಮಕ್ಕಳಾಗುವೆವು. 'ಹರಿಜನ' ಶಬ್ದದ ಅರ್ಥವೂ ಅದೇ ಆಗಿರುವದು. ಇದಾಗುವ ವರೆಗೆ 'ಅಸ್ಪೃಶ್ಯತೆ'ಯನ್ನು ಸೂಚಿಸುವ ಯಾವದೇ ಶಬ್ದವು ಕೀಳ ಭಾವನೆಯನ್ನೆವ್ಯಕ್ತಪಡಿಸುವುದು. ಅಸ್ಪೃಶ್ಯತೆಯ ಕೊನೆಯ ಗುರುತು ಕೂಡ ಅಳಿಸಿಹೋಗುವಂತೆ ಜೀವನದ ಪ್ರತಿಯೊಂದು ಅಂಗದಲ್ಲಿ ನಾವು ಈ ಕಾರ್ಯಪದ್ಧತಿಯನ್ನು ಸಾಗಿಸಿಕೊಂಡು ಹೋಗಲೆಬೇಕು. ಅನಂತರವೆ ಆ ಸುಖಮಯ ದಿನದ ಉದಯವಾಗುವದು. ಪ್ರತಿಯೊಂದು ವಸತಿಯೂ ಹರಿಜನ ವಸತಿಯಾಗುವದು. ಹೃದಯ ಮತ್ತು ಗೃಹ ನೈರ್ಮಲ್ಯವೆ ಅಂದಿನ ಜನತೆಯ ನಡೆವಳಿಕೆಯಾಗಿ ಪರಿಣಮಿಸುವದು.

ಹೊಸದಿಲ್ಲಿ — ಮೋ. ಕ. ಗಾಂಧಿ

೫—೪—೪೬.

# ಆ. ಹಿಂ. ಸೇನೆಯ ಸಂದೇಶ

ಆಝಾದ ಹಿಂದಸೇನೆಯ ಕೈದಿಗಳನ್ನು ಮಹಾತ್ಮರು ಸಂದರ್ಶಿಸಿ ಬಂದ ನಂತರ ಮರುದಿನ ಸಾಯಂ ಪ್ರಾರ್ಥನೆಯ ಸಭೆಯಲ್ಲಿ ಹೀಗೆ ಹೇಳಿದರು.

ನಿನ್ನಿನಿಂದ ನನ್ನ ತಲೆಯಲ್ಲಿ ಸುಳಿದಾಡುತ್ತಿರುವ ವಿಚಾರಗಳನ್ನು ನಿಮಗೆ ಹೇಳಗೊಡಿರಿ. ಬಂಧಮುಕ್ತ ಆ. ಹಿಂ. ಸೈನಿಕರಿಗೆ ಭಾರತವು ರಾಜಕೀಯ ಸ್ವಾಗತವಿತ್ತಿದೆ. ಅವರನ್ನು ರಾಷ್ಟ್ರವೀರರೆಂದು ಪರಿಗಣಿಸಲಾಗುತ್ತಿದೆ. ಉಕ್ಕೇರುತ್ತಿರುವ ಜನತೆಯ ಪ್ರಬಲ ಭಾವನೆಯೆದುರು ಪ್ರತಿಯೊಬ್ಬನೂ ದಿಙ್ಮೂಢನಾಗಿದ್ದಾನೆ. ಆದರೆ ಅಂಧರಂತೆ ಈಗ ನಡೆಸಿರುವ ವೀರಪೂಜೆಯನ್ನು ನಾನು ಒಪ್ಪುವದಿಲ್ಲೆಂದು ಸ್ಪಷ್ಟವಾಗಿ ಹೇಳುತ್ತೇನೆ. ನೇತಾಜಿ ಬೋಸ ಮತ್ತು ಆ. ಹಿಂ. ಸೈನಿಕರ ಯೋಗ್ಯತೆ ಸ್ವಾರ್ಥತ್ಯಾಗ ಮತ್ತು ರಾಷ್ಟ್ರಪ್ರೇಮವನ್ನು ನಾನು ಗೌರವಿಸುತ್ತೇನೆ. ಆದರೆ ಭಾರತ ಸ್ವಾತಂತ್ರ್ಯಕ್ಕಾಗಿ ಕಾಂಗ್ರೆಸು ಕಳೆದ ೨೫ ವರ್ಷಗಳಿಂದ ಅನುಸರಿಸುತಿರುವ ಮಾರ್ಗಕ್ಕೆ ವಿರುದ್ಧವಾಗಿ ಅವರು ಸ್ವೀಕರಿಸಿರುವ ಮಾರ್ಗವನ್ನು ನಾನು ಅನುಮೋದಿಸಲಾರೆನು. ನಿನ್ನೆ ನಾನು ನಿಮಗೆ ಸ್ಥಿತಪ್ರಜ್ಞನ ಬಗ್ಗೆ ಹೇಳಿದೆ. ಅವನೆ ಸತ್ಯಾಗ್ರಹಿ ನಾವು ಆ ಧ್ಯೇಯವನ್ನು ಅಂಗೀಕರಿಸಿದರೆ ಯಾರನ್ನೂ ನಾವು ವೈರಿಗಳೆಂದು ಎಣಿಸಲಾರೆವು. ದ್ವೇಷ, ದುರಿಚ್ಛೆಗಳನ್ನೆಲ್ಲ ಬಿಟ್ಟುಕೊಡಬೇಕು. ಆ ಧ್ಯೇಯವು ಕೇವಲ ಸಾಧುಸಂತರಾದ ಕೆಲವರಿಗಾಗಿಯೇ ಇದೆಂವಲ್ಲ. ಎಲ್ಲರಿಗಾಗಿ ಆ ಧ್ಯೇಯವಿದೆ. ನಾನು ಕೇವಲ ವಿಚಾರದಲ್ಲಲ್ಲದೆ ಆಚಾರದಲ್ಲಿಯೂ 'ಭಂಗಿ' ಯಾಗಿದ್ದೇನೆಂದು ಫೋನಿಕ್ಸದಲ್ಲಿದ್ದಾಗಲೆ ಹೇಳಿದ್ದೇನೆ ಪಾಮರರಲ್ಲಿಯ ಪಾಮರನೊಡನೆ ಒಂದಾಗುವದಕ್ಕಾಗಿ ನಾನು ಅಲ್ಲಿರುವಾಗಲೆ ಕೈಯಲ್ಲಿ ಬುಟ್ಟಿ ಕಸಬೊರಿಕೆಗಳನ್ನು ಹಿಡಿದುದುಂಟು. ಇದೀಗ ಪಠಿಸಿದ ಗೀತೆಯ ಶ್ಲೋಕಗಳಲ್ಲಿ ನಿರೂಪಿಸಿದ ಸ್ಥಿತಪ್ರಜ್ಞನ ಮನಸ್ಥಿತಿಯನ್ನು ಹಳ್ಳಿಯ ಹುಂಬ ಒಕ್ಕಲಿಗನೂ ಪ್ರಯತ್ನಿಸಿದರೆ ಹೊಂದಬಹುದು ಎಂದು ನಾನೊಬ್ಬ ಸಾಮಾನ್ಯ ಶ್ರಮಜೀವಿಯಂತೆ ಹೇಳಬಿಚ್ಛಿಸುತ್ತೇನೆ. ನಾವು ನಮಗರಿಯದಂತೆ, ಅರಿತರೂ ಒಪ್ಪಿಕೊಳ್ಳದಂತೆ ಎಷ್ಟೋ ಸಲ ನಮ್ಮ ವಿವೇಕವನ್ನು ಕಳೆದುಕೊಳ್ಳುತ್ತೇವೆ ಸ್ಥಿತಪ್ರಜ್ಞನು ಚಿಕ್ಕ ಬಾಲಕನೊಂದಿಗಿದ್ದಾಗ ಕೂಡ ತನ್ನ ತಾಳ್ಮೆಯನ್ನು ಕಳೆದುಕೊಳ್ಳುವದಿಲ್ಲ, ಸಿಟ್ಟಿಗೇಳುವದಿಲ್ಲ. ಬಿರುನುಡಿಗಳನ್ನಾಡುವದಿಲ್ಲ. ಗೀತೆಯಲ್ಲಿ ಸಾರಿದ ಧರ್ಮವು ನಮ್ಮ ಜೀವನದಲ್ಲಿ ರೂಪಿಸಿಕೊಳ್ಳಬೇಕಾದುದು. ನೀವು ಇಹದಲ್ಲಿ ಏನು ಬೇಕಾದುದನ್ನು ಮಾಡಿ ಪರದಲ್ಲಿ ಪುಣ್ಯಸಂಚಯ ಮಾಡುವದಕ್ಕಾಗಿ ಅದೊಂದು ನಿಮಗೆ ದಾರಿಯಲ್ಲ. ಅದು ಧರ್ಮವಿರುದ್ಧವಾದುದು.

ಸ್ಥಾನಬದ್ಧತೆಯಲ್ಲಿರುವ ಆ. ಹಿಂ. ಸೈನಿಕರನ್ನು ಕಾಣುವದು ನನಗೊಂದು ಕರ್ತವ್ಯವಾಗಿತ್ತು. ಅವರನ್ನು ಕಾಣಲು ಸಮರ್ಥನಾದುದಕ್ಕೆ ನನಗೆ ಸಂಪೂರ್ಣ ಸಮಾಧಾನವಾಗಿದೆ. ಅವರೂ ನನ್ನನ್ನು ಅಪಾರ ಪ್ರೀತಿಯಿಂದ ಕಂಡುದನ್ನು ನಾನು ಮರೆಯಲಾರೆನು. ನಾನೊಬ್ಬ ನಾಡಿನ ನಿಸ್ಸೀಮ ಸೇವಕನೆಂದು ಅವರು ಮನ್ನಿಸಿ ನನಗೆ ಸ್ವಾಗತವನ್ನಿತ್ತರೆಂದು ನಂಬಿದ್ದೇನೆ.

ನೇತಾಜಿಯು ನನಗೆ ಮಗನಂತಿದ್ದರು. ದೇಶಬಂಧು ದಾಸರ ನೆಚ್ಚಿನ ಹಸ್ತಕರೆಂದು ನನಗೆ ಅವರ ಪರಿಚಯವಾಯಿತು. ಆ. ಹಿಂ. ಸೈನಿಕರು ಹೊರನಾಡಿನಲ್ಲಿ ಶಸ್ತ್ರಾಸ್ತ್ರಗಳಿಂದ ಹೋರಾಡಿದರೂ ಭಾರತದಲ್ಲಿ ಅವರು ಕಾಂಗ್ರೆಸಿನ ಅಹಿಂಸೆಯ ಮಾರ್ಗದಿಂದಲೆ ವೀರ ಯೋಧರಂತೆ ಹೋರಾಡಬೇಕೆಂದು ತಮ್ಮ ಸೈನಿಕರಿಗೆ ಕೊನೆಯ ಸಂದೇಶವನ್ನಿತ್ತಿದ್ದರು. ಕಾಂಗ್ರೆಸದ ಧುರೀಣತ್ವದಲ್ಲಿ ಅದರ ಮಾರ್ಗದರ್ಶನದಂತೆ ನಡೆದುಕೊಳ್ಳಬೇಕೆಂದು ಆ ಸೈನಿಕರಿಗೆ ಹೇಳಿದ್ದರು. ಸಮಸ್ಯೆಗಳನ್ನು ಬಗೆಹರಿಸಲು ಕೈದುಗಳನ್ನು ಕೈಕೊಳ್ಳಿರಿ ಎಂಬುದು (ನಿರುಪಯುಕ್ತವೆಂದು ಸಿದ್ಧವಾಗಿದೆ) ಆ. ಹಿಂ. ಸೇನೆಯ ಭಾರತಕ್ಕಿತ್ತ ಸಂದೇಶವಲ್ಲ. ಆದರೆ ಅಹಿಂಸೆ, ಐಕ್ಯ, ಸಾಮರಸ್ಯ ಸಂಘಟನೆಗಳನ್ನು ಸಾಧಿಸಿ ಸಮಸ್ಯೆಗಳನ್ನು ಬಗೆಹರಿಸಬೇಕೆಂಬುದು ಆ. ಹಿಂ. ಸೈನ್ಯದ ಸಂದೇಶವಾಗಿದೆ.

ಆ. ಹಿಂ. ಸೇನೆಯು ಸಶ್ಯದ ತನ್ನ ಧ್ಯೇಯ ಸಾಧನೆಯಲ್ಲಿ ಅಯಶಸ್ವಿಯಾಗಿದ್ದರೂ ಅವರು ಹೆಮ್ಮೆಪಡಬಹುದಾದಷ್ಟು ಕೀರ್ತಿಯನ್ನು ಸಂಪಾದಿಸಿದ್ದಾರೆ. ಭಾರತದ ಎಲ್ಲ ಜಾತಿ ಜನಾಂಗಗಳ ಜನರು ಒಂದೇ ಧ್ವಜದಡಿಯಲ್ಲಿ ಸೇರಿ ಐಕ್ಯ ಭಾವನೆಯನ್ನು ತುಂಬಿಕೊಂಡು ಜಾತಿಯ ಅಥವಾ ಪ್ರಾಂತೀಯ ಭಾವನೆಗಳನ್ನು ಹೊಡೆದಟ್ಟಿದ್ದು ಅವರು ಸಾಧಿಸಿದ ಅದ್ಭುತ ಸಂಗತಿ. ಈ ಉದಾಹರಣೆಯನ್ನು ನಾವೆಲ್ಲರೂ ಅನುಸರಿಸಬೇಕು. ಕೇವಲ ಯುದ್ಧದ ಪ್ರೇಮ, ದೀಪ್ತಿಗಳಿಂದ ಇದನ್ನು ಸಾಧಿಸಿದ್ದರೆ ಮಹತ್ವದ್ದಲ್ಲ. ಶಾಂತಿ ಸಮಯದಲ್ಲಿಯೂ ಇದು ಉಳಿಯಬೇಕು. ಇದು ಗಹನ ಗಂಭೀರವಾದ ಕಾರ್ಯ. ನಾವು ಕರ್ತವ್ಯ ಮಾಡುತ್ತ ಇತರರ ಬಲಿ ತೆಗೆದುಕೊಳ್ಳದೆ ನಾವೇ ಬಲಿಯಾಗಬೇಕು. ಇದಕ್ಕಾಗಿ ನಾವು ಗೀತೆಯಲ್ಲಿ ಹೇಳಿದ ಸ್ಥಿತಪ್ರಜ್ಞನ ಗುಣಗಳನ್ನು ಮೈಗೂಡಿಸಿಕೊಳ್ಳಬೇಕು.

ಖಡ್ಗದ ಶಕ್ತಿಗಿಂತಲೂ ಸತ್ಯಾಗ್ರಹದ ಶಕ್ತಿಯು ಪ್ರಬಲವಾದುದು. ಆ. ಹಿಂ. ಸೈನಿಕರಿಗೆ ನಾನು ಹಾಗೆ ಹೇಳಿದೆ. ತಮಗೂ ಇದರ ಅರಿವಾಗಿದೆ. ತಾವೆಲ್ಲ ಇನ್ನು ಮುಂದೆ ಕಾಂಗ್ರೆಸದ ಧ್ವಜದಡಿಯಲ್ಲಿ ಭಾರತದ ಸೇವೆಗಾಗಿ ಅಹಿಂಸೆಯ ನಿಜವಾದ ಸೈನಿಕರಂತೆ ಹೋರಾಡುವೆವು ಎಂದು ಅವರು ಸಂತೋಷದಿಂದ ಹೇಳಿದ್ದನ್ನು ನಾನು ಕೇಳಿದೆ.

ಹೊಸದಿಲ್ಲಿ ಪ್ಯಾರೇಲಾಲ

೮—೪—೪೬

---

# ಸುದ್ದಿಗಾರರ ನೋಟ

ಸೋಯಾಬೀನದ ಬಗ್ಗೆ ಈ ಪತ್ರಿಕೆಯಲ್ಲಿ ಈಗಾಗಲೆ ಬರೆದದ್ದಾಗಿದೆ. ಬರೇಲಿಯಿಂದ ಒಬ್ಬರು ಹೀಗೆ ಬರೆಯುತ್ತಾರೆ:—

" ಈ ಜಿಲ್ಹೆಯ ನನ್ನ ಹೊಲಗಳಲ್ಲಿ ಸೋಯಾಬೀನನ್ನು ಬೆಳೆದಿದ್ದೇನೆ. ಸೋಯಾಬೀನವು ಮುಂಗಾರಿ ಬೆಳೆಯೆಂದು ಭರದಿಂದ ಬೆಳೆದಿದೆ ಅದರ ಅನೇಕ ಪದಾರ್ಥಗಳನ್ನು ನನ್ನ ಗೆಳೆಯರು ರುಚಿ ನೋಡಿ ಸಂತೋಷಿಸಿದ್ದಾರೆ. ಈಗ ಹಾಲಿನ ಕೊರತೆ ಇರುವಾಗ ನನ್ನ ಸ್ನೇಹಿತನೊಬ್ಬನು ಇಡೀ ಯುದ್ಧಕಾಲದಲ್ಲಿ- ಸೋಯಾಬೀನದ ಹಾಲನ್ನೇ ಉಪಯೋಗಿಸುತ್ತಿದ್ದಾನೆ."

" ಇನ್ನು ಮಳೆಗಾಲದಲ್ಲಿ ಮಳೆಯ ನೀರು ಹೆಚ್ಚಾಗೆ ನಿಲ್ಲದಿರುವ ಎಲ್ಲ ಹೊಲಗಳಲ್ಲಿ ಸೋಯಾಬೀನನ್ನು ದೊಡ್ಡ ಪ್ರಮಾಣದಲ್ಲಿ ಬೆಳೆಯಬಹುದು. ಬಂಗಲೆಗಳ ಆವಾರಗಳಲ್ಲಿ ಇದನ್ನು ಬೆಳೆಯಲು ತೀರ ಅನುಕೂಲ. ಯುಕ್ತಪ್ರಾಂತದ ಪಶ್ಚಿಮ ಭಾಗದವರೂ ಪಂಜಾಬಿಗಳೂ ಬಹಳ ಅಕ್ಕಿಯನ್ನುಪಯೋಗಿಸಿದರೆ ಅವರ ಆರೋಗ್ಯಕ್ಕೆ ಹಾನಿಯಾಗದಿರದು. ಸಜ್ಜೆ, ಗೋವಿನಜೋಳಗಳು ಅನೇಕರಿಗೆ ಒಗ್ಗುವದಿಲ್ಲ, ಗೋದಿ ಸಾಕಷ್ಟು ಸಿಗುವದಿಲ್ಲ. ಇಂಥಲ್ಲಿ ಸೋಯಾಬೀನು ಕೆಲಮಟ್ಟಿಗೆ ಕೊರತೆಯನ್ನು ನೀಗಿಸಬಲ್ಲದು."

* * *

ಶ್ರೀಮತಿ ಲೀಲಾವತಿ ಮುನಶಿಯವರು ತೋಟಗರ ಸಂಘದಲ್ಲಿ ಮೊನ್ನೆ ಮಾತಾಡುತ್ತ ಮುಂಬಯಿ ಕಾರ್ಪೋರೇಶನದವರಿಗೂ ಸಾರ್ವಜನಿಕರಿಗೂ ಕೆಲವು ಉಪಯುಕ್ತ ಸೂಚನೆಗಳನಿತ್ತಿದ್ದಾರೆ.

೧) ಮಲಬಾರ ದಿನ್ನೆಯ ತೂಗುವ ತೋಟಗಳನ್ನು ಬಿಟ್ಟು ಮುಂಬಯಿ ಗ್ಯಾರೇಜದಿಂದ ಕೆಂಪ ಕಾರ್ನರದ ವರೆಗಿನ ಇಳುಕಲನ್ನೆಲ್ಲ ಕಾಯಿಪಲ್ಲೆ ಬೆಳೆಯುವದಕ್ಕಾಗಿ ಉಪಯೋಗಿಸಬೇಕು. ಇದರಿಂದ ೧೦೦೦ ಜನರಿಗೆ ಕಾಯಿಪಲ್ಲೆ ಪೂರೈಕೆ ಆಗುವದು.

೨) ಬಂಗಲೆಗಳ ಮಾಳಿಗೆಗಳ ಮೇಲೆ ಆಧುನಿಕ ಪದ್ಧತಿಗಳ ಪ್ರಕಾರ ಟೊಮ್ಯಾಟೊ ಮತ್ತು ತೊಪ್ಪಲು ಪಲ್ಲೆ ಬೆಳೆಯಬೇಕು.

೩) ನಗರದ ಹೇಸಿಕೆಯಿಂದ ರಾಸಾಯನಿಕ ರೀತಿಯಲ್ಲಿ ಗೊಬ್ಬರ ತಯಾರಿಸಬೇಕು.

೪) ಶಾಲೆಗಳಲ್ಲಿಯೂ ಮನೆಗಳಲ್ಲಿಯೂ ಹಣ್ಣಿನಗಿಡ, ಕಾಯಿಪಲ್ಲೆ, ಧಾನ್ಯಗಳನ್ನು ಬೆಳೆಯುವ ಪ್ರವೃತ್ತಿಯನ್ನು ಬಾಲಕರಲ್ಲಿ ಹುಟ್ಟಿಸಬೇಕು.

ಕಾಯಿಪಲ್ಲೆಯ ತೋಟವನ್ನು ಅಂದವಾಗಿಟ್ಟರೆ ಕಣ್ಣಿಗೆ ಹಬ್ಬವಾಗುವದೆಂದು ಅವರು ಹೇಳುವದು ಸರಿಯಾಗಿದೆ. ಸಂಘವು ಈ ಬಗ್ಗೆ ಸೂಚನೆಗಳನ್ನು ಕೊಡಲು ಸದಾ ಸಿದ್ಧವಿದೆ.

* * *

ಕಾಯಿಪಲ್ಲೆಗಳನ್ನು ಆದಷ್ಟು ಬೇಯಿಸದೆ ತಿನ್ನಬೇಕು. ಆಗಾಗ ಉಪವಾಸ ಮಾಡಬೇಕು ಎಂದು ಮಹಾತ್ಮರು ಸೂಚಿಸಿದ್ದನ್ನು ಬೇರೊಬ್ಬರು ಸ್ವಾಗತಿಸಿದ್ದಾರೆ. ಸಾದಾ ಆಹಾರ ಮತ್ತು ಯೋಗಾಸನಗಳ ವ್ಯಾಯಾಮದಿಂದ ಅನೇಕರಿಗೆ ತಮ್ಮ ಕೊಬ್ಬನ್ನು ಕಳೆದುಕೊಳ್ಳಲು ಸಹಾಯವಾಗುವದಲ್ಲದೆ ಅವರ ಪಚನಕ್ರಿಯೆಯು ಸುಧಾರಿಸುತ್ತದೆ ಸಿರಿವಂತರು ಅನುಚಿತ ಆಹಾರ ತಿನ್ನುವದರಿಂದ ಇಲ್ಲವೆ ಅತಿಭೋಜನದಿಂದ ಅನೇಕ ರೋಗಗಳನ್ನು ತಂದುಕೊಳ್ಳುತ್ತಾರೆ. ಈಗಿನ ವಿಷಮ ಪರಿಸ್ಥಿತಿಯಲ್ಲಿ ಸಂಯಮದಿಂದ ವರ್ತಿಸಿದರೆ ಈ ಮೇಲಿನ ಎರಡೂ ದೋಷಗಳನ್ನು ನೀಗಿಸಿಕೊಳ್ಳಬಹುದು.

* * *

ಆಡಿನ ಹಾಲನ್ನು ಸುಲಭದಲ್ಲಿ ಪಡೆಯಬಹುದು. ಅನೇಕ ದೊಡ್ಡ ಕುಟುಂಬಗಳಲ್ಲಿ ದಿನಾಲು ಕಾಯಿಪಲ್ಲೆಗಳ ಸಿಪ್ಪೆ ಮುಂತಾದದ್ದು ಎಂದು ಒಂದು ಆಡಿನ ಹೊಟ್ಟೆಗೆ ಸಾಕಾಗುವಷ್ಟನ್ನು ತಿಪ್ಪೆಗೆಸೆಯಲಾಗುತ್ತದೆ.

ನಮ್ಮ ದೇಶದಲ್ಲಿ ಹುಲ್ಲುಗಾವಲುಗಳು ದುರ್ಲಭವಾದಾಗ ಇಂದಿನ ದಿನದಲ್ಲಿ ಒಕ್ಕಲಿಗರು ದನಗಳನ್ನು ಸಾಕುವ ಯೋಗ್ಯತೆ ಇಲ್ಲದವರಾದಾಗ ಹಿಂಡುವ ಆಸೇ ಬಡವರ ಆಕಳಾಗಬೇಕು.

ಆಡಿನ ಹಾಲಿನ ವಾಸನೆ ಕೆಲವರಿಗೆ ಸೇರುವದಿಲ್ಲ. ಆದರೆ ಹಿಂಡುವಾಗ ಸ್ವಚ್ಛತೆಯನ್ನು ಪಾಲಿಸಿ ಹಾಲನ್ನು ಕುದಿಸಿದರೆ ಈ ವಾಸನೆ ಇಲ್ಲದಂತಾಗುವದು.

ಉರಳಿ ಆ. ಕು.

೨೮—೩—೪೬

---

# ಪುಣೆಯಲ್ಲಿ ಕುಷ್ಟರೋಗ

ಪುಣೆಯಲ್ಲಿ ಕುಷ್ಟರೋಗಿಗಳ ಗುಂಪೊಂದಿರುವದು. ಅವರ ಮಕ್ಕಳೂ ಅಲ್ಲಿಯೇ ಇರುವರು. ಕಥಾಡೀಖಾನಾ ಎಂದು ಕರೆಯಲ್ಪಡುವ ಅಸ್ವಚ್ಛ ಪ್ರದೇಶದಲ್ಲಿ ತಗಡಿನ ಚಪ್ಪರಗಳನ್ನು ಬಾಡಿಗೆಗೆ ತೆಗೆದುಕೊಂಡು ಅವರೆಲ್ಲ ಇರುತಿರುವರು. ಮತ್ತು ಎಲ್ಲರೂ ಕೂಡಿಯೆ ವಸತಿಗೃಹದಲ್ಲಿರುವಂತೆ ಇರುತಿರುವರು. ಬಿಕ್ಕೆ ಬೇಡಿಕೊಂಡು ಅವರು ಜೀವಿಸುವರು. ಖಾಂಡ್ವಾ ಕುಷ್ಟರೋಗಿಗಳ ಭವನದಿಂದ ಹೊರಗೆ ಹಾಕಿಸಿಕೊಳ್ಳಲ್ಪಟ್ಟವರು ಇಲ್ಲವೆ ಅದನ್ನು ಬಿಟ್ಟುಗೊಟ್ಟು ಬಂದವರು ಇಲ್ಲಿ ಕೂಡಿಕೊಂಡೆ ಇರಹತ್ತಿದರು. ಅವರು ಪುಣೆಗೆ ಬಂದ ಉಳಿದ ರೋಗಿಗಳನ್ನು ಆಕರ್ಷಿಸಿಕೊಂಡರು. ಈ ವರೆಗೆ ಅದು ಅಂತಃ ಪ್ರಾಂತಿಕ ವಸಾಹತಾಗಿತ್ತು ೩೭ ಗಂಡಸರು ೩೨ ಹೆಣ್ಣುಮಕ್ಕಳು ೧೭ ಮಕ್ಕಳು ಹೀಗೆ ೮೫ ಜನ ಅಲ್ಲಿರುತಿರುವರು. ಅವರಲ್ಲಿ ಕೆಲವರು ವಿಶೇಷತಃ ಹೆಣ್ಣುಮಕ್ಕಳು ತಮ್ಮ ಕುಟುಂಬದವರೆ ತಮ್ಮನ್ನು ಹೇಗೆ ತ್ಯಜಿಸಿದರೆಂಬ ಕತೆಯನ್ನು ಹೇಳಿದರು. ಮಾನವತೆಯೆಷ್ಟೊಂದು ನಿಕೃಷ್ಟ ನೀಚಸ್ಥಿತಿಗಿಳಿದಿದೆಂಬುದರ ದುರಂತ ದೃಶ್ಯವನ್ನು ಅದು ಚಿತ್ರಿಸುತಿದೆ. ಆದರೆ ಅವರಲ್ಲಿ ಆಕರ್ಷಕ ಬಂಧುಭಾವನೆ ಮತ್ತು ಪರಸ್ಪರ ಸಹಾಯಪ್ರವೃತ್ತಿ ಇದ್ದುದು ನನಗೆ ಕಂಡುಬಂದಿತು.

ಈ ಜನರಿಗೆ ಇನ್ನಷ್ಟು ಹೆಚ್ಚು ಯೋಗ್ಯ ರೀತಿಯಿಂದ ಜೀವನವನ್ನು ಸಾಗಿಸಿಕೊಳ್ಳಲನುಕೂಲವಾಗುವಂತೆ ಪ್ರಯತ್ನಿಸುವದರಲ್ಲಿಯ ಅಡಚಣಿಗಳು ನನಗೆ ಸಂಪೂರ್ಣ ಗೊತ್ತಿವೆ. ಅವರನ್ನು ನಿಯಂತ್ರಿಸುವದು ಕಠಿನವಾಗುವದೆಂಬುದು ನಿರ್ವಿವಾದ. ಆದರೆ ಅವರು ಸಹಾಯ ಸ್ವೀಕರಿಸುವದಾಗಿ ಹೇಳುತಿರುವರು. ಅವರೆಲ್ಲ ಕೂಡಿಯೆ ಇರಹತ್ತಿದ್ದರಿಂದ ನಮ್ಮ ಮೇಲೆ ಬಹಳ ಪರಿಣಾಮವನ್ನುಂಟು ಮಾಡಿದೆ. ಅವರ ದುಃಸ್ಥಿತಿಯನ್ನು ನೋಡಿದರೆ ಅಲಕ್ಷಿಸಲಾರದಂಥ ಕೂಗು ನಮ್ಮನ್ನು ಕರೆಯಹತ್ತುತ್ತದೆ. ಈ ಕಾರ್ಯದಲ್ಲಿರುವ ಅಡಚಣಿಗಳು ಹೆಚ್ಚಿದಂತೆ ಅದರ ಬಗ್ಗೆ ನಾವು ಹೆಚ್ಚು ಆಸ್ಥೆಯನ್ನು ವಹಿಸಬೇಕಾಗಿದೆ. ಅವರು ಹೆಚ್ಚು ಉತ್ತಮ ಸ್ಥಿತಿಯಲ್ಲಿರುವಂತೆ ಅವರಿಗೆ ಸಹಾಯ ಮಾಡಬೇಕಾಗಿದೆ. ಅವರ ಮಕ್ಕಳನ್ನು ಕಾಯಿಲೆಯಿಂದ ಮತ್ತು ದುಃಸ್ಥಿತಿಯಿಂದ ಮುಕ್ತ ಮಾಡಬೇಕಾಗಿದೆ. ಸಾಮಾಜಿಕ ಸೇವೆಗಾಗಿ ಪುಣೆಯೆಂದಿನಿಂದಲೂ ಖ್ಯಾತಿ ಪಡೆದಿದೆ. ರಾನಡೆ, ಗೋಖಲೆ, ತಿಲಕ, ದೇವಧರ ಮೊದಲಾದ ಸಮಾಜ ಸೇವಕರನ್ನು ಸ್ಮರಿಸಿ ಈ ರೋಗಿಗಳ ಸಲುವಾಗಿ ಒಳ್ಳೆ ಸ್ಥಾನವನ್ನು ಕಲ್ಪಿಸಿಕೊಟ್ಟು ಅವರು ಸ್ವಾವಲಂಬಿಗಳಾಗಿ ಜೀವನ ಸಾಗಿಸುವಂತೆ ವ್ಯವಸ್ಥೆ ಮಾಡಲು ಮುಂದಾಗ ವರೆಂದು ಆಶಿಸಬಹುದಲ್ಲವೆ?

ಮುಂಬಯಿ ಟಿ. ಎನ್. ಜಗದೀಶನ್

೨-೩-೪೬

---

# ಕಸ್ತೂರಬಾ ಕುಷ್ಟರೋಗ ಸಂಸ್ಥೆಯ ಕಾರ್ಯ

ಪ್ರೊ. ಟಿ. ಎನ್. ಜಗದೀಶನ್ನರ ನೇತೃತ್ವದಲ್ಲಿ ಈ ಕಾರ್ಯವು ೧೯೪೫ ನೇ ಇಸ್ವಿಯ ಮೇ ೧೯ ರಿಂದ ನಡೆದಿದೆ. ದಿನಾಲು ಮಾಡುತಿರುವ ಕಾರ್ಯದ ಸಂಕ್ಷಿಪ್ತ ವರದಿಯನ್ನು ಅವರು ಒಪ್ಪಿಸುತ್ತಿರುವರು. ಈ ಕಾರ್ಯಕ್ಕಾಗಿಯೆಂದೇ ಸಂಸ್ಥಾಪಿಸಿದ ಸಮಿತಿಗೆ ಡಾ. ಟಿ. ಎಸ್. ಎಸ್ ರಾಜನ್‌ರು ಚೆಅರಮನ್‌ರು ಡಾ. ಆರ್. ಜಿ. ಗೋಕ್ರಾನೆಯವರ ನೇತೃತ್ವದಲ್ಲಿ ಡಾ. ವಿ. ಪಿ. ರಾಮುಸ್ವಾಮಿಯವರು ಈ ಕಾರ್ಯದಲ್ಲಿ ವಿಶಿಷ್ಟ ಶಿಕ್ಷಣ ಪಡೆದಿರುವರು. ಅವರು ಹಳ್ಳಿಗಳ ಪರಿಶೀಲನ ಕಾರ್ಯವನ್ನು ಮಾಡುವದಲ್ಲದೆ ಹೊರಗಿನ ರೋಗಿಗಳ ಚಿಕಿತ್ಸೆಯನ್ನೂ ಮಾಡುತಿರುವರು.

ಕಂದಾಚಿಪುರಂ ಶಾಲೆಗಳಲ್ಲಿಯ ೬೫೫ ವಿದ್ಯಾರ್ಥಿಗಳ ಮೊದಲನೆಯ ಪರಿಶೀಲನೆಯಲ್ಲಿ ಕುಷ್ಟರೋಗವಲ್ಲದೆ ಕಜ್ಜಿ ಇಸಬು ಮೊದಲಾದ ರೋಗಗಳೂ ಕಂಡು ಬಂದವು, ನೂರಕ್ಕಿಂತ ಹೆಚ್ಚು ವಿದ್ಯಾರ್ಥಿಗಳನ್ನು ಪರೀಕ್ಷಿಸಿ ೩೨-೪೦ ಜನರನ್ನು ಕುಷ್ಟರೋಗಕ್ಕಾಗಿ ಚಿಕಿತ್ಸೆ ಮಾಡಲಾಯಿತು.

ಮದವಿಲೆಜಂಹಳ್ಳಿಯಲ್ಲಿ ೫೯೩ ನಿವಾಸಿಗಳಲ್ಲಿ ೧೮ ಜನರು ಕುಷ್ಟರೋಗದಿಂದ ಬಳಲುತ್ತಿದ್ದರು. ನಾಲ್ಕು ಸಾಂಕ್ರಾಮಿಕವಾಗಿದ್ದವು. ಮಕ್ಕಳೆಲ್ಲ ಅನಿರ್ಬಂಧವಾಗಿ ಸಂಪರ್ಕ ಬೆಳೆಸುತ್ತಿರುವದರಿಂದ ಸಾಂಕ್ರಾಮಿಕ ರೋಗ ಬೆಳೆಯುತ್ತಲಿದೆ.

ಅಡುಕವರ ಹಳ್ಳಿಯಲ್ಲಿ ೩೨ ನಿವಾಸಿಗಳಲ್ಲಿ ೧೫ ಜನ ಕುಷ್ಟ ರೋಗಿಗಳು. ಇವರಲ್ಲಿ ೫ ಜನರು ಸಾಂಕ್ರಾಮಿಕ ಇನ್ನೆರಡು ಹಳ್ಳಿಗಳಲ್ಲಿ ೫೯ ಮತ್ತು ೧೫ ಜನ ಕುಷ್ಟರೋಗಿಗಳಿದ್ದು ಅವರಲ್ಲಿ ೯ ಜನರು ಮಹಾರೋಗಿಗಳು.

ಡಾ. ರಾಮುಸ್ವಾಮಿಯವರು ಇನ್ನು ಅಯಿದು ಹಳ್ಳಿಗಳ ಪರಿಶೀಲನೆಯನ್ನೂ ಮಾಡಿರುವರು. ಇವರಲ್ಲಿ ೩೦೦ ಜನರಿಗೆ ಕುಷ್ಟರೋಗವಿದ್ದದ್ದು ಕಂಡುಬಂದಿತು. ಅವರಲ್ಲಿ ೭ ವರ್ಷದೊಳಗಿನ ಹೆಣ್ಣುಮಕ್ಕಳ ಸಂಖ್ಯೆ ೧೫೭ ಇದ್ದು ಅವರು ಮಾತ್ರ ಈ ನಿಧಿಯ ಲಾಭವನ್ನು ಪಡೆಯಬಹುದು.

ಬಡ ರೋಗಿಗಳಲ್ಲಿ ಗಂಡಸರ ಬಗ್ಗೆ ಲಕ್ಷಕೊಡುವದು ಅವಶ್ಯವಾಗಿದ್ದರೂ ನಿಧಿಯ ಹಣವನ್ನು ಪಡೆಯಲಾರರೆಂದು ಪ್ರೊ. ಟಿ. ಎನ್. ಜಗದೀಶನ್‌ರ ವರದಿಯು ಉಲ್ಲೇಖಿಸುತ್ತದೆ. ಟ್ರಸ್ಟಿನ ಕರಾರುಗಳನ್ನು ಮುರಿದು ಈ ದೋಷವನ್ನು ಹೋಗಲಾಡಿಸುವದು ಶಕ್ಯವಿಲ್ಲ ಆದರೆ ಪ್ರೊಫೆಸರರು ಸ್ಥಳಿಕರಿಂದ ಸ್ವಲ್ಪ ನಿಧಿ ಸೇರಿಸಿ ತಮ್ಮ ಕಾರ್ಯ ಕ್ಷೇತ್ರದಲ್ಲಿ ಅವರನ್ನು ಅಳವಡಿಸಿಕೊಳ್ಳಬಹುದು.

ಹೊಸದಿಲ್ಲಿ ಮೋ. ಕ. ಗಾಂಧಿ

೪—೪—೪೬.

---

# ಪ್ರಾರ್ಥನಾಗೀತದ ಮಹತ್ವ

ಸಾಯಂ ಪ್ರಾರ್ಥನೆಯ ಕಾಲಕ್ಕೆ ಹಾಡಿದ ಗೀತದ ಅರ್ಥವನ್ನು ವಿವರಿಸುತ್ತ ಮ. ಗಾಂಧಿಯವರು ಬುಧವಾರ ದಿನ ಮಹತ್ವದ ಭಾಷಣ ಮಾಡಿದರು. "ಪರಮಾತ್ಮ ರಕ್ಷಿತನನ್ನು ಜಗತ್ತಿನಲ್ಲಿ ಯಾವ ಶಕ್ತಿಯೂ ನೋಯಿಸಲಾರದೆಂಬುದು ಈ ಗೀತದ ಸಂದೇಶ. ಜಗತ್ತಿನ ಇಂದಿನ ಗಂಡಾಂತರ ಪರಿಸ್ಥಿತಿಯಲ್ಲಿಯಂತೂ ಇದು ಅತ್ಯಂತ ಸಮಂಜಸವಾಗಿದೆ. ಯುದ್ಧ ಮುಗಿದಿದ್ದರೂ ಯುದ್ಧ ಕಾರಣಗಳು ಮಾಯವಾಗಿಲ್ಲ. ಇದು ಶಾಂತಿಯಲ್ಲ. ಮತ್ತೊಂದು ಯುದ್ಧದ ಗುಪ್ತಸಿದ್ಧತೆಯಿದು ಎಂದು ಮುಂದಾಗಿ ಹೇಳಿದರು.

# ಮೊದಲ ಹೆಜ್ಜೆ, ಕೊನೆಯದಲ್ಲ

ಮಹಾತ್ಮರು ಮುಂಬಯಿಯಲ್ಲಿ ಉಳಿದುಕೊಂಡಂತೆ ಹೊಸದಿಲ್ಲಿಯಲ್ಲಿಯೂ ಹರಿಜನಕೇರಿಯಲ್ಲಿಯೆ ಉಳಿದುಕೊಂಡಿದ್ದಾರೆ. ಅವರ ಪರಿವಾರದವರಿಗಾಗಿ ವಾಲ್ಮೀಕಿ ಮಂದಿರದ ಹತ್ತಿರ ಎರಡು ಡೇರೆಗಳನ್ನೂ ಒಂದು ಹಂದರವನ್ನೂ ನಿಲ್ಲಿಸಲಾಗಿದೆ. ಇಲ್ಲಿಯ ಹರಿಜನ ಕೇರಿಯಲ್ಲಿಯ ಕಾರ್ಯಕಲಾಪಗಳನ್ನು ಕುರಿತು ವರದಿ ಮಾಡಲು ಮಹಾತ್ಮರು ಶ್ರೀ ಮಹಾದೇವ ದೇಸಾಯರನ್ನು ಕೆಲ ವರ್ಷಗಳ ಹಿಂದೆ ಇಲ್ಲಿಗೆ ಕಳಿಸಿದ್ದರು. ಸವರ್ಣ ಹಿಂದುಗಳಲ್ಲಿ ಕೆಲವರು ಇಲ್ಲಿಯ ಹರಿಜನರಲ್ಲಿ ನಡೆಸಿದ್ದ ಕಾರ್ಯವನ್ನು ಅವರು ಶ್ಲಾಘಿಸಿ ಮಹಾತ್ಮರು ಎಂದಾದರೊಂದು ದಿನ ಇಲ್ಲಿಗೆ ಬಂದು ವಾಸ ಮಾಡಬಹುದೆಂದು ಶ್ರೀ ಮಹಾದೇವರು ತಮ್ಮ ಇಚ್ಛೆಯನ್ನು ವ್ಯಕ್ತಪಡಿಸಿದ್ದರು. ಆದ್ದರಿಂದ ಈಗ ಇಲ್ಲಿ ಉಳಿದುಕೊಳ್ಳಲು ಮಹಾತ್ಮರಿಗೆ ಬಹಳ ಸಂತೋಷವಾಗುತ್ತದೆ. 'ಹಿಂದುಗಳು ನಾವು ಮಾತ್ರ ಅತಿಶೂದ್ರರಾಗಿರದೆ ಆಚಾರವಿಚಾರಗಳಲ್ಲಿಯೂ ಅತಿಶೂದ್ರರಾಗಿದ್ದಾರೆಂದು ಇತ್ತೀಚೆಗೆ ಹೇಳುತ್ತಿದ್ದೇನೆಂದು ಮಹಾತ್ಮರು ದಿಲ್ಲಿಗೆ ಬಂದ ದಿನವೆ ಸಾಯಂಪ್ರಾರ್ಥನೆಯ ಸಭೆಯಲ್ಲಿ ಹೇಳಿದರು. "ಕಸಗುಡಿಸುವ ಚಿಹ್ನೆಯೊಂದೆ ಇದಕ್ಕೆ ಸಾಕಿಲ್ಲ. ಆದ್ದರಿಂದ ನಾನು ಹರಿಜನಕೇರಿಗೆ ಹೋಗಿ ಅವರೊಂದಿಗೆ ವಾಸ ಮಾಡಬೇಕೆಂದು ನಿರ್ಧರಿಸಿದ್ದೇನೆ."

"ಹರಿಜನ ಕೇರಿಯಲ್ಲಿ ವಾಸಿಸುತ್ತಿರುವದರಿಂದ ಅವರ ಜೀವನದಲ್ಲಿ ನಾನು ಭಾಗಿಯಾಗಿದ್ದೇನೆಂದು ಹೇಳಿ ನನ್ನನ್ನು ನಾನು ವಂಚಿಸಿಕೊಳ್ಳುವದಿಲ್ಲ. ನಾನು ಕೆಲವು ಹರಿಜನರ ಗುಡಿಸಲುಗಳನ್ನು ನೋಡಿದ್ದೇನೆ. ಅಲ್ಲಿ ಕಸ, ಕೊಳೆ ಎಲ್ಲ ತುಂಬಿರುತ್ತದೆ. ಹರಿಜನರು ಅಲ್ಲಿಯೆ ವಾಸ ಮಾಡುತ್ತಾರೆ. ನಾನಿರುವ ಈ ಪ್ರದೇಶವೆಲ್ಲ ಪ್ರಕಾಶಮಾನವಾಗಿದೆ. ನನಗೂ ನನ್ನ ಪರಿವಾರದವರಿಗೂ ಸೇಠ ಬಿರ್ಲಾರು ಒದಗಿಸಿದ ಸೌಕರ್ಯಗಳನ್ನು ಕಂಡು ನನಗೆ ಸಂಕೋಚವಾಗುತ್ತದೆ. ನಾನಿಲ್ಲಿ ವಾಸವಾಗಲು ಬರುತ್ತಿರುವದು ಮೊದಲ ಹೆಜ್ಜೆ, ಕೊನೆಯದಲ್ಲ. ಪ್ರತ್ಯಕ್ಷವಾಗಿ ಹರಿಜನನೊಬ್ಬನ ಗುಡಿಸಲಲ್ಲಿ ವಾಸವಾಗಿ ಅವನು ಕೊಟ್ಟ ಅನ್ನವನ್ನು ತಿನ್ನುವ ಸುದಿನ ಬಂದೀತೆ ಎಂದು ಹಾರೈಸುತ್ತಿದ್ದೇನೆ. ಅದಕ್ಕಾಗಿ ನಿತ್ಯ ಪ್ರಾರ್ಥಿಸುತ್ತಿದ್ದೇನೆ. ಆದರೆ ಈಗಿನ ಮಟ್ಟಿಗೆ ಹರಿಜನರ ಗುಡಿಸಲುಗಳಿಂದ ಸುತ್ತುಗಟ್ಟಿದ ಈ ಧರ್ಮಶಾಲೆಯಲ್ಲಾದರೂ ವಾಸವಾಗಲು ಅನುಕೂಲವಾಯಿತಲ್ಲಾ ಎಂದು ನನಗೆ ಸಮಾಧಾನವಾಗಿದೆ."

ಮಹಾತ್ಮರು ಇಲ್ಲಿಗೆ ಆಗಮಿಸಿದೊಡನೆ ಹರಿಜನರಲ್ಲಿ ಕೆಲವರು ವಿರೋಧಮತ ಪ್ರದರ್ಶನವನ್ನು ಕೈಕೊಂಡರು. ಅವರ ಬಗ್ಗೆ ಮಹಾತ್ಮರು ಹೀಗೆ ಹೇಳುತ್ತಾರೆ.

'ನಾನು ಅವರ ಮೇಲೆ ಹೇಗೆ ಸಿಟ್ಟಾಗಲಿ. ಸವರ್ಣರು ಅವರನ್ನು ಇದು ವರೆಗೆ ನಡೆಸಿಕೊಂಡಿದ್ದ ರೀತಿಯ ಬಗ್ಗೆ ಅವರಲ್ಲಿ ಹುದುಗಿದ್ದ ತಿರಸ್ಕಾರವನ್ನು ನಾನು ಸಂಪೂರ್ಣವಾಗಿ ಅರಿಯದಿರೆನು. ಅವರು ಸೇಡು ತೀರಿಸಿಕೊಳ್ಳಲೂ ಇಚ್ಛಿಸಬಹುದು ನಮ್ಮ ನಡೆ-ನುಡಿಗಳಲ್ಲಿ ಅಜಗಜಾಂತರ ವ್ಯತ್ಯಾಸವಿದೆ. ಅವರು ತಾಳ್ಮೆಗೆಡುವದು ಸಹಜವಾದದ್ದು ಹಿಂದೂ ಸಮಾಜದೊಡನೆ ಸಹಿಷ್ಣುತೆಯಿಂದ ನಡೆದುಕೊಳ್ಳಿರಿ ಎಂದಿಷ್ಟೆ ನಾನು ಅವರಿಗೆ ಹೇಳಬಲ್ಲೆ. ಯುಗಾಂತರದ ಕೇಡನ್ನು ಒಂದೆ ದಿನದಲ್ಲಿ ಅಳಿಯಲಿಕ್ಕಾಗುದದಿಲ್ಲ. ಅದಾದರೂ ಹೋಗಬೇಕು ಇಲ್ಲವೆ ಹಿಂದುತ್ವವಾದರೂ ನಾಶವಾಗಬೇಕು. ಆದರೆ ಅಲ್ಲಿಯ ವರೆಗೆ ಹರಿಜನರಿಗಿಲ್ಲದ ಸೌಕರ್ಯಗಳನ್ನು ನಾವೂ ಒಲ್ಲದೆ ಅವರ ಕೊರತೆಗಳಲ್ಲಿ ನಾವೂ ಭಾಗಿಗಳಾಗಿ ನಮ್ಮ ತಪ್ಪಿಗೆ ಕನಿಷ್ಠವಾದ ದಂಡವನ್ನು ತೆರಬಲ್ಲೆವು. ಹರಿಜನರ ಸದ್ಯದ ಜೀವನದ ಪರಿಸ್ಥಿತಿಯು ಓರಣವಂತನ ಮನಸ್ಸಿಗೆ ಒಂದು ದಿನವಾದರೂ ಒಗ್ಗಲಾರದು. ನನ್ನಂಥವನು ಕೂಡ ಯಾವ ಸಂಕೋಚವಿಲ್ಲದೆ ಹರಿಜನಕೇರಿಯಲ್ಲಿ ಹೋಗಿ ವಾಸವಾಗುವಂತೆ ಅಲ್ಲಿಯ ಸ್ವಚ್ಛತೆ, ನೈರ್ಮಲ್ಯ ಮುಂತಾದವು ಈಗಾದರೂ ಕಂಡು ಬರಬೇಕೆಂದು ನಾನು ಕೇಳಿಕೊಳ್ಳುತ್ತೇನೆ."

ವಾಲ್ಮೀಕಿ ಮಂದಿರದ ಅಂಗಣದಲ್ಲಿ ನೆರೆಯುತ್ತಿದ್ದ ಸಾಯಂಪ್ರಾರ್ಥನೆಯ ಸಭೆಯು ಈಗ ಜನರು ದಿನ ದಿನಕ್ಕೆ ಹೆಚ್ಚಾಗುತ್ತ ನಡೆದಿದ್ದರಿಂದ ಅಜಮೀರದ್ವಾರದ ಹೊರಗಿನ ವಿಶಾಲವಾದ ಬಯಲಿನಲ್ಲಿ ಸೇರುತ್ತಿದೆ. ಕೇವಲ ದರ್ಶನಾಪೇಕ್ಷೆಯಿಂದ ಯಾರೂ ಸಾಯಂಪ್ರಾರ್ಥನೆಗೆ ಬರಬಾರದೆಂದು ಮಹಾತ್ಮರು ಮೊದಲಿಗೆ ತಿಳಿಸಿದ್ದಾರೆ. ಪ್ರಾರ್ಥನೆ ಸಲ್ಲಿಸಬೇಕೆಂಬ ಇಚ್ಛೆ ಇದ್ದವರೆ ಬರಬೇಕು. ಆದರೂ ಜನಸಮುದಾಯವು ದಿನ ದಿನಕ್ಕೆ ಹೆಚ್ಚಿ ಹೀಗೆ ಸ್ಥಳಾಂತರ ಮಾಡಬೇಕಾಯಿತು.

### ಶುಭ ಮುಹೂರ್ತ

ಮಹಾತ್ಮರನ್ನು ದಿಲ್ಲಿಗೆ ಕರೆಸಿಕೊಂಡ ಬ್ರಿಟಿಶ ರಾಯಭಾರವು ನಸುಕಿನಿಂದ ರಾತ್ರಿಯ ವರೆಗೆ ಅವರಿಗೆ ವಿಶ್ರಾಂತಿಯನ್ನೇ ಕೊಡುವದಿಲ್ಲ. ಇದಲ್ಲದೆ ಮರೆಯಲಾಗದ ದುಷ್ಕೃತ್ಯಗಳಿಂದ ಕೂಡಿದ ಬ್ರಿಟಿಶ್ ಆಳಿಕೆಯು ಕೊನೆಗೊಂಡು ಭಾರತ ಸ್ವಾತಂತ್ರ್ಯೋದಯದ ಶುಭಮುಹೂರ್ತದಲ್ಲಿ ಜನರೆಂತು ನಡೆದುಕೊಳ್ಳುವರೊ ಎಂಬ ಯೋಚನೆಯೂ ಅವರನ್ನು ಕಾಡುತ್ತಿದೆ. ಬ್ರಿಟಿಶರ ದುಷ್ಟ ಆಳಿಕೆಯ ಬಗ್ಗೆ ಜನರ ಎದೆಯಲ್ಲಿ ಹುದುಗಿರುವ ದ್ವೇಷದ ಆಳವನ್ನು ಮಹಾತ್ಮರು ಅರಿತವರಾಗಿದ್ದಾರೆ. ಅದು ಜ್ವಾಲೆಯಂತೆ ಉಂದೆದ್ದರೇನು ಗತಿ? ಇದನ್ನು ನಿಯಂತ್ರಿಸಿ ಇಂಥ ದುರಂತವನ್ನು ತಡೆಯುವದಕ್ಕಾಗಿ ಮಹಾತ್ಮರು ತಮ್ಮ ಶಕ್ತಿಯನ್ನು ಉಪಯೋಗಿಸುತಿದ್ದಾರೆ. ಕಳೆದ ಶನಿವಾರ ಅವರು ಮಧ್ಯರಾತ್ರಿಯ ನಂತರವೂ ಎಚ್ಚತ್ತಿದ್ದರು. ರಾತ್ರಿ ಕಾವಲಿದ್ದವನೆದುರು ಹೀಗೆ ಅದಿ ತೋರಿಸಿದರಂತೆ

"ಪರಿಸ್ಥಿತಿಗೆ ಉಚಿತವಾದ ಧೈರ್ಯ ಮತ್ತು ಜಾಣ್ಮೆಯಿಂದ ಜನರು ನಡೆದುಕೊಳ್ಳುವಂತೆ ಅವರನ್ನು ಜ್ಞಾಪಿಸಲು ನನಗೆ ವಾಣಿಯನ್ನು ಕೊಡು ದೇವರೇ ಎಂದು ಪ್ರಾರ್ಥಿಸುತಿದ್ದೆ."

ಈ ವಾರದಲ್ಲಿ ಅವರು ಗೆಳೆಯರ ಪ್ರಾರ್ಥನಾ ಸಭೆಗೆ ಹೋಗಿದ್ದರು. ಅಝಾದ ಹಿಂದ ಸೈನಿಕರ ಶಿಬಿರಕ್ಕೂ ಅಸ್ಪತ್ರೆಗೂ ಭೆಟ್ಟಿ ಕೊಟ್ಟರು. ಅವರು ಅಝಾದ ಹಿಂದ ಸೈನಿಕರಿಗೆ ಕೆಲ ಮಾತುಗಳನ್ನು ಹೇಳಿದರು. ಆ ಭಾಷಣವೂ ಇದೇ ಸಂಚಿಕೆಯಲ್ಲಿ ಬೇರೆಡೆ ಪ್ರಸಿದ್ಧವಾಗಿದೆ.

ಹೊಸದಿಲ್ಲಿ ಪ್ಯಾರೇಲಾಲ

೯-೯-೪೬

# ಸ್ವಾವಲಂಬನ ಖಾದಿ ವಿರುದ್ಧ ಮಾರಾಟದ ಖಾದಿ

ಈ ಸಮಸ್ಯೆ ಹುಟ್ಟಲು ನಾವೇ ಹೊಣೆಗಾರರು. ಖಾದಿಯ ಶಾಸ್ತ್ರವು ನಮಗೆ ಗೊತ್ತಿರಲಿಲ್ಲ. ಈಗಲೂ ಅದು ನಮಗೆ ಸಂಪೂರ್ಣವಾಗಿ ಪರಿಚಿತವಿಲ್ಲ. ಆದುದರಿಂದ ಮಕ್ಕಳಂತೆ ನಾವು ಆಗಾಗ ಎಡವುತ್ತ ಮುಗ್ಗರಿಸುತ್ತ ನಡೆಯಲು ಕಲಿಯುತಿದ್ದೇವೆ. ಮತ್ತೆ ಏಳದಂತೆ ಕೆಳಗೆಬೀಳಬಾರದೆಂದು ನಾವು ಕೈಗಾಡಿಯನ್ನು ಮಾಡಿಕೊಂಡು ಅದರ ಉಪಯೋಗ ಈಗಲೂ ಮಾಡುತ್ತೇವೆ. ಇದನ್ನರಿತುಕೊಂಡು ಅಖಿಲ ಭಾರತ ಚರಕ ಸಂಘವು ತನ್ನ ಅಸ್ತಿತ್ವಕ್ಕಾಗಿ ವಿಶೇಷ ಪರಿಶ್ರಮಮಾಡಬೇಕು; ಇಲ್ಲದಿದ್ದರೆ ನಾಶಹೊಂದಬೇಕಾಗಬಹುದು. ಅಖಿಲ ಭಾರತ ಚರಕಸಂಘವೆಂದಕೂಡಲೆ ಅದರಲ್ಲಿಯ ಎಲ್ಲ ಕಾರ್ಯಕರ್ತರು ನೂಲುವವರುಕೂಡ ಸಮಾವೇಶರಾಗುವರು. ನೂಲುವವರನ್ನು ಸ್ವಾವಲಂಬಿಗಳನ್ನಾಗಿ ಮಾಡಿ ಅವರ ಚಟುವಟಿಕೆಗಳ ಮುಖಾಂತರ ಹಿಂದುಸ್ತಾನದ ಸ್ವಾತಂತ್ರ್ಯ ಪಡೆಯಬೇಕೆಂಬುದು ಸಂಘದ ಧೋರಣವಾಗಿದೆ, ಆಗಿರತಕ್ಕದ್ದೆಂಬದನ್ನು ಮನಸಿನಲ್ಲಿಟ್ಟುಕೊಳ್ಳತಕ್ಕದ್ದು. ಆ ಧ್ಯೇಯವನ್ನು ನಾವು ಸಾಧಿಸಲಾರೆವೆಂಬುದಕ್ಕಾಗಿ ನಾವು ಅನವಶ್ಯಕ ವಿಷಾದಕ್ಕೊಳಗಾಗಬಾರದು. ಅದೆ ನಿಜವಾದ ಗುರಿಯೆಂಬದನ್ನು ತಿಳಿದುಕೊಂಡು ಮುಂದೆ ನಡೆದರೆ ಸಾಕು. ಒಮ್ಮೆ ಚಟುವಟಿಕೆಗಳನ್ನು ಪ್ರಾರಂಭಿಸಿದ ಬಳಿಕ ಆಗಬಹುದಾದ ತಪ್ಪುಗಳನ್ನು ಸರಿಪಡಿಸಿಕೊಂಡು ಮುನ್ನುಗ್ಗಬೇಕು. ಶಾಸ್ತ್ರೀಯ ಪದ್ಧತಿಯ ಮೂಲ ತತ್ವವದು. ಯಾವ ಶಾಸ್ತ್ರವೂ ಆಕಾಶದಿಂದ ಪರಿಪೂರ್ಣಾವಸ್ಥೆಯಲ್ಲಿ ಕೆಳಗ ಬೀಳಲಿಲ್ಲ. ಎಲ್ಲ ಶಾಸ್ತ್ರಗಳು ಪ್ರಗತಿಹೊಂದುತಿವೆ ಮತ್ತು ಅನುಭವದಿಂದಲೆ ಮುಂದೆ ಸಾಗುತಿವೆ. ಶಾಸ್ತ್ರಗಳಿಗೆ ಪರಿಪೂರ್ಣತೆಯೆಂಬುದು ಒಗ್ಗುವುದಿಲ್ಲ ಪರಿಪೂರ್ಣತೆ ಮಾನವನಿಗೂ ಶಕ್ಯವಿಲ್ಲ ಅವನು ಸಂಶೋಧಿಸುವ ಶಾಸ್ತ್ರಗಳಿಗೂ ಶಕ್ಯವಿಲ್ಲ; ಉದಾಹರಣಾರ್ಥವಾಗಿ ಜ್ಯೋತಿಶ್ಶಾಸ್ತ್ರವು ಪ್ರಗತಿಹೊಂದುತ್ತಲೆ ಸಾಗಿದೆ. ಅನೇಕ ತಪ್ಪುಗಳಾಗಿವೆ ಅವುಗಳನ್ನೆಲ್ಲ ತಿದ್ದುಕೊಂಡಿರುವರು. ಅದು ಈಗಲೂ ಹಾಗೆಯೆ ಸಾಗಿದೆ. ಖಾದೀ ಶಾಸ್ತ್ರಕ್ಕೂ ಇದೇ ಮಾತು ಅನ್ವಯಿಸುವುದು.

ಈ ಮಾತನ್ನು ಚೆನ್ನಾಗಿ ತಿಳಿದುಕೊಂಡು ಅಂಜಿಕೆ ಅಳುಕುಗಳಿಲ್ಲದೆ ಕಾರ್ಯಪ್ರವೃತ್ತರಾದರೆ ಆಯಾ ಕಾಲಕ್ಕೆ ಉದ್ಭವಿಸಬಹುದಾದ ಸಮಸ್ಯೆಗಳಿಗೆ ಪರಿಹಾರ ಸಿಕ್ಕಲು ಸುಲಭವಾಗಬಹುದು. ನೂಲುವವನಿಗೆ ಮೊದಲಿನಿಂದ ಕೊನೆಯ ವರೆಗೆ ನೇಯುವ ವರೆಗೆ ಕೂಡ ಎಲ್ಲ ವಿಧಾನಗಳು ಸಂಪೂರ್ಣವಾಗಿ ಗೊತ್ತಿರಬೇಕು. ಇದರಲ್ಲಿಯೇ ಸ್ವರಾಜ್ಯ ಮಾರ್ಗ ಅಡಕವಾಗಿದೆ. ಈ ವರೆಗೆ ತಿಳಿದೊ ತಿಳಿಯದಲೊ ನಾವೆಲ್ಲ ಮಾರಾಟದ ದೃಷ್ಟಿಯಿಂದಲೆ ಖಾದಿಯ ಉತ್ಪಾದನಮಾಡುತ್ತ ಬಂದಿದ್ದೇವೆ. ಆದರೆ ಇದನ್ನೂ ಯಾವಾಗಲೂ ಸ್ವರಾಜ್ಯ ಧ್ಯೇಯಕ್ಕೆ ಸಂಬದ್ಧ ಮಾಡಿದ್ದೇವೆ. ಹಾಗಾಗಿರದಿದ್ದರೆ ಮಾರಾಟದ ದೃಷ್ಟಿಯಿಂದಲೂ ಖಾದಿ ಚಳವಳಿ ಯಶಸ್ವಿಯಾಗುತಿದ್ದಿಲ್ಲ ಮತ್ತು ಸ್ವರಾಜ್ಯಕ್ಕಾಗಿ ಖಾದಿ ಎಂಬುದು ಕೇವಲ ಸ್ವಪ್ನದಂತೆ ಪರಿಣಮಿಸುತಿದ್ದಿತು.

ಮಾರಾಟದ ಖಾದಿ ಎಂಬುದು ಹಿಂದೆಯೂ ನಮ್ಮ ಕೈಗಾಡಿಯಾಗಿದ್ದಿತು ಈಗೂ ಆಗಿದೆಂದು ಹೇಳಬಹುದು- ನೂಲುವ ಹೆಣ್ಣುಮಗಳಿಗೆ ತನ್ನ ಅರಳಿಯನ್ನು ಎರಡನೆಯವರಿಂದ ಹಿಂಜಿಸಿಕೊಳ್ಳುವುದು ಈಗಲೂ ಹೆಚ್ಚಿನ ಅವಲಂಬನ. ಇದನ್ನೆಲ್ಲ ಬಿಟ್ಟುಗೊಟ್ಟು ಪ್ರಗತಿ ಹೊಂದುತ್ತ ನಡೆದಂತೆ ನಾವು ಸ್ವರಾಜ್ಯಕ್ಕಾಗಿ ಖಾದಿಯ ಉತ್ಪಾದನೆ ಮಾಡಿದಂತಾಗುವದು. ಯಾವ ಶಾಖೆಗಳಲ್ಲಿ ವ್ಯಾಪಾರಕ್ಕಾಗಿ ಖಾದಿಯ ಉತ್ಪಾದನ ನಡೆದಿದೆಯೊ ಮತ್ತು ಅರಳಿ ಹಿಂಜುವ ಚಟುವಟಿಕೆ ಪ್ರತ್ಯೇಕವಾಗಿ ಸಾಗಿದೆಯೊ ಅಂಥ ಶಾಖೆಗಳನ್ನು ಶಕ್ಯವಿದ್ದರೆ ಮುಚ್ಚಿಬಿಡತಕ್ಕದ್ದು. ಆದರೆ ಜೀವನದಲ್ಲಿ ನಾವು ಹೇಗಾದರೂ ಒಂದ ಕ್ಕೊಂದು ಸರಿದಿಪಸಿಕೊಳ್ಳುತ್ತೇವೆ. ಆದುದರಿಂದ ಈ ಅವಲಂಬನಗಳನ್ನು ಶಕ್ಯವಿದ್ದಷ್ಟು ಬೇಗ ಬಿಟ್ಟುಗೊಡತಕ್ಕದ್ದು. ಯಾರಿಗೆ ವಿಶ್ವಾಸ ಮತ್ತು ಜ್ಞಾನವಿರುವದೊ ಅಂಥವರು ಹಾಗೆ ಮಾಡುವಲ್ಲಿ ಅಗ್ರಣಿಗಳಾಗಬೇಕು. ನಿಷ್ಠೆಯಿಂದ ಪ್ರಯತ್ನಿಸಿದ್ದಾದರೆ ಸ್ಪರ್ಧೆಯ ಸಮಸ್ಯೆಯೆ ಉದ್ಭವಿಸಬಾರದು.

ಸದ್ಯದ ಪರಿಸ್ಥಿತಿಯು ಒಂದು ಮಾತಿನತ್ತ ಗಮನಿಸಬೇಕಾಗಿದೆ. ಹೊಟ್ಟೆಪಾಡಿಗಾಗಿ ನೂಲುವವರು ಹೊಸ ವಿಧಾನಗಳನ್ನೆಲ್ಲ ಆನಂದದಿಂದ ಕಲಿಯಲು ಮುಂದಾಗುವರು. ಏಕೆಂದರೆ ಅದರಿಂದ ಅವರ ಗಳಿಕೆ ಹೆಚ್ಚುವದು. ಆದರೆ ಇಂದು ಉತ್ಪನ್ನದ ಬೇರೆ ಸುಲಭ ಮಾರ್ಗಗಳು ಅವರಿಗೆ ಮುಕ್ತದ್ವಾರವಿರುವುದರಿಂದ ಈ ವಿಭಾಗವು ಕಣ್ಮರೆಯಾಗುತ್ತ ನಡೆದಿದೆ. ಅವರಿಗೆ ಅದೇನು ನೈತಿಕ ಪ್ರಶ್ನೆಯಲ್ಲ. ಹೆಚ್ಚು ಸುಲಭವಾದ ಉದ್ಯೋಗಕ್ಕೆ ಅವರು ಹತ್ತುವರು. ಉದಾಹರಣಾರ್ಥವಾಗಿ ಬೀಡಿಗಾಗಿ ಎಲೆಗಳನ್ನು ಕೂಡಿಸುವರು. ಅವರಿಗೆ ನಿಜವಾದ ಜ್ಞಾನ ಮಾಡಿಕೊಟ್ಟು ಸ್ವರಾಜ್ಯದ ಕಡಿದಾದ ದಾರಿಯನ್ನು ಕ್ರಮಿಸುವಲ್ಲಿ ಅವರಿಗೆ ಸಹಾಯ ಮಾಡಬೇಕು. ಆ ದಾರಿಯನ್ನು ಹತ್ತುವುದಕ್ಕಾಗಿ ಅವರನ್ನು ನಿರೋಗಿ ಮತ್ತು ಗಟ್ಟಿಗರನ್ನಾಗಿ ಮಾಡಬೇಕು. ನಾವು ಹಾಗೆ ಮಾಡದಿದ್ದರೆ ಜೀವಿಸಲಿಕ್ಕೇ ಅನರ್ಹರಾಗುವೆವು. ಆದುದರಿಂದ ಅರ್ಥ ತಿಳಿದುಕೊಂಡು ನೂಲುವ ಗಂಡಸರಗೂಡ ಇಲ್ಲವೆ ಹೆಣ್ಣುಮಕ್ಕಳಗೂಡ ಮಾತ್ರವೆ ನಾವು ವ್ಯವಹಾರವನ್ನಿಟ್ಟುಕೊಳ್ಳತಕ್ಕದ್ದು.

ನೂಲುವದು ಈಗೊಂದು ವ್ಯವಸಾಯವೆಂದು ಅಂಗೀಕೃತವಾದ್ದರಿಂದ ನಾವು ಅದನ್ನು ಮುಂದೆ ನಡೆಸತಕ್ಕದ್ದೆಂಬದನ್ನು ನೆನಪಿನಲ್ಲಿಡತಕ್ಕದ್ದು. ಆದುದರಿಂದ ಮಾರಾಟದ ಖಾದಿಯಉತ್ಪಾದನೆಯ ಬಗ್ಗೆ ನಾವೇನು ವಿಷಾದಪಡಬೇಕಾಗಿಲ್ಲ. ಇದರಿಂದ ಏನೇ ಅಡಚಣೆಗಳು ಬಂದರೂ ಕಾರ್ಯಕರ್ತರು ಅವನ್ನು ದೂರಗೊಳಿಸಬೇಕು. ಇಂಥದೊಂದು ವಿಷಯವು ಈ ವಿವರಣೆಯಲ್ಲಿ ಬರುವದೊ ಇಲ್ಲವೊ ಎಂದು ಕೇಳುವುದು ಮಾನಸಿಕ ಆಲಸ್ಯದ ಇಲ್ಲವೆ ಅಜ್ಞಾನದ ಲಕ್ಷಣವು. ನಿಗಮನಗಳನ್ನು ಹೊಡೆದು ಹಾಕಲು ಬಾರದಿದ್ದವನಿಗೆ ಭೂಮಿತಿಯ ಜ್ಞಾನವೆ ಇಲ್ಲೆಂದು ಹೇಳಬೇಕಾಗುವದು. ಎಲ್ಲ ಶಾಸ್ತ್ರಗಳಿಗೂ ಇದೇ ಮಾತು ಅನ್ವಯಿಸುವಿದು.

ಹೊಸದಿಲ್ಲಿ ಮೋ. ಕ. ಗಾಂಧಿ

೩-೪-೪೬.

( ಹರಿಜನಬಂಧುವಿನಿಂದ )

# ವನಸ್ಪತಿ ಮತ್ತು ತುಪ್ಪ

[ ೬ ನೇ ಪುಟದಿಂದ ಮುಂದರಿದುದು ]

ಸರಕಾರಕ್ಕೆ ಶಕ್ಯವಿಲ್ಲದಿದ್ದರೆ ಕನಿಷ್ಠ ಅದರ ಮೇಲೆ ನಿಯಂತ್ರಣ ಹಾಕುವುದು ಅತ್ಯವಶ್ಯವಾಗಿದೆ.

೨) ವನಸ್ಪತಿಯನ್ನು ಸಿದ್ಧಮಾಡುವವರಿಗೆ ಠೋಕ ಮತ್ತು ಕಿರುಕಳ ಮಾರಾಟಗಾರರಿಗೆ ಲಾಯಸೆನ್ಸ ಕೊಡತಕ್ಕದ್ದು. ಇಂಥ ವ್ಯಾಪಾರಿಗಳು ಶುದ್ಧ ತುಪ್ಪದ ವ್ಯವಹಾರ ಮಾಡಬಾರದು. ಇಲ್ಲವೆ ತಮ್ಮ ಅಂಗಡಿಗಳಲ್ಲಿ ಅದನ್ನು ಸಂಗ್ರಹಿಸಬಾರದು

೩) ಹಿಂದುಸ್ತಾನದಲ್ಲಿ ತಯಾರಾಗುವ ಈ ವನಸ್ಪತಿಗೆ ಬಣ್ಣ ಕೊಡಬೇಕೆಂದು ನಿರ್ಬಂಧಪಡಿಸಬೇಕು; ಹೊರಗಿನಿಂದ ಬರುವ ವನಸ್ಪತಿಗೂ ಹಿಂದೀ ಬಂದರಗಳಲ್ಲಿ ಅದು ಇಳಿದ ಕೂಡಲೆ ಬಣ್ಣ ಕೊಡಬೇಕು. ಇದನ್ನು ಸಿದ್ಧಪಡಿಸುವವರು ವನಸ್ಪತಿಯಲ್ಲಿ ನೂರಕ್ಕೆ ೧೦ ರಷ್ಟು ಎಳ್ಳೆಣ್ಣೆಯನ್ನು ಕೂಡಿಸಬೇಕು. ಹೀಗೆ ಎಳ್ಳೆಣ್ಣೆ ಕೂಡಿಸುವದರಿಂದ ಶುದ್ಧ ತುಪ್ಪದಲ್ಲಿ ವನಸ್ಪತಿಯ ಮಿಶ್ರಣವಾದರೆ ಅದನ್ನು ಗೊತ್ತುಪಡಿಸಲು ಬಹಳ ಹಗುರಾಗುವದು. ರಾಸಾಯನಿಕ ಪ್ರಯೋಗಗಳಿಂದ ಎಳ್ಳೆಣ್ಣೆಯನ್ನು ಬಹಳ ಸುಲಭವಾಗಿ ಆ ಮಿಶ್ರಣದಲ್ಲಿ ಕಂಡು ಹಿಡಿಯಬಹುದು.

೪) ವನಸ್ಪತಿಯನ್ನು ತುಪ್ಪದಂತೆ ಕಾಣುವಂತೆ ಮಾಡುವದನ್ನು ನಿರ್ಬಂಧಿಸಬೇಕು.

೫) ವನಸ್ಪತಿಯಿಂದ ಸಿದ್ಧವಾಗುವ ಆಹಾರ ಪದಾರ್ಥಗಳನ್ನು ಮಾರಾಟ ಮಾಡುವವರು ಹಾಗೆ ಬರೆದುಹಚ್ಚಬೇಕೆಂದು ಕಾಯದೆಯಿಂದ ನಿರ್ಬಂಧ ಪಡಿಸಬೇಕು. ಹೀಗೆ ಮಾಡದಿದ್ದವರ ಹತ್ತಿರ ವನಸ್ಪತಿ ದೊರೆತರೆ ಅಪರಾಧ ಮಾಡಿದಂತಾಗುವದೆಂದು ಕಾಯದೆ ಮಾಡಬೇಕು. ವನಸ್ಪತಿಯಿಂದ ಪದಾರ್ಥಗಳನ್ನು ಮಾಡಿ ಶುದ್ಧ ತುಪ್ಪದಲ್ಲಿ ಮಾಡಿದ ಪದಾರ್ಥಗಳೆಂದು ಹೇಳುವ ಹಲವಾಯಿಗಳು ಮತ್ತು ಮಿಠಾಯಿಗಾರರ ಹಾವಳಿ ಇದರಿಂದ ತಪ್ಪುವದು.

೬) 'ವನಸ್ಪತಿ ತುಪ್ಪ' ಇಲ್ಲವೆ ಬೇರೆ ಯಾವದೆ ಹೆಸರಿನಿಂದ ವನಸ್ಪತಿಯು ಪೇಟೆಯಲ್ಲಿ ಮಾರಾಟಕ್ಕಿರಕೂಡದು. ಅದರಲ್ಲಿಯ ಮಿಶ್ರಣ ಮುಂತಾದ್ದರ ಬಗ್ಗೆ ಗಿರಾಕಿಗಳಿಗೆ ಏನೂ ತಿಳಿಯದೆ ಮೋಸಹೋಗುವ ಸಂಭವವಿರುವದರಿಂದ ಹೀಗೆ ಮಾಡುವದವಶ್ಯವಾಗಿದೆ.

೭) ತುಪ್ಪ ಕಳಿಸಲು ಉಪಯೋಗಿಸುವಂಥ ಡಬ್ಬಿಗಳಲ್ಲಿ ಈ ವನಸ್ಪತಿಯನ್ನು ತುಂಬಿ ಪೇಟೆಗೆ ಕಳಿಸಬಾರದು. ಅಲ್ಲದೆ ವನಸ್ಪತಿ ತುಂಬಿದ ಡಬ್ಬಿಗಳ ಮೇಲೆ ಸ್ಪಷ್ಟವಾಗಿ ಗುರುತಿನ ಚೀಟಿ ಹಚ್ಚಬೇಕು.

ಗೋಪೂಜಕರ ಲಾಭಬಡಕತನದಿಂದಲೆ ಮುಖ್ಯವಾಗಿ ಈ ಬಗೆಯ ಅಪಕಾರ ಮಾಡಲ್ಪಡುತ್ತದೆಂಬುದು ಸ್ಪಷ್ಟವಿದೆ. ವನಸ್ಪತಿ ಸಂಪೂರ್ಣವಾಗಿ ಅನವಶ್ಯಕವಾಗಿದೆ. ಎಣ್ಣೆಗಳನ್ನು ವಿಶುದ್ಧಿಸಿ ಇವುಗಳಲ್ಲಿದ್ದ ಅಪಾಯಕರ ಸತ್ವಗಳನ್ನು ತೆಗೆದು ಹಾಕಬಹುದು. ಆದರೆ ಶುದ್ಧ ತುಪ್ಪದಂತೆ ಕಾಣಲು ಅವನ್ನು ಘನರೂಪದಲ್ಲಿ ಪರಿವರ್ತಿಸಕೂಡದು. ಪ್ರಾಮಾಣಿಕ ಉತ್ಪಾದಕನು ಮೋಸ ಮಾಡಲೆಳಸುವದಿಲ್ಲ. ಪೇಟೆ ಅಂಥವರಿಂದ ತುಂಬಿದೆ. ಖೊಟ್ಟಿ ನಾಣ್ಯ ಮಾಡುವವರಿಗೆ ಉಗ್ರ ಶಿಕ್ಷೆ ವಿಧಿಸಲಾಗುತ್ತದೆ. ತುಪ್ಪ ನಾಣ್ಯಗಳಿಗಿಂತ ಹೆಚ್ಚು ಅಮೂಲ್ಯವಾದ ವಸ್ತುವಾದ್ದರಿಂದ ಅಶುದ್ಧ ತುಪ್ಪಕ್ಕಾಗಿ ಏಕೆ ಶಿಕ್ಷೆವಿಧಿಸಬಾರದು? ಅರೆ ರಾಷ್ಟ್ರದ ಆರೋಗ್ಯವನ್ನು ಕೂಡ ಲೆಕ್ಕಿಸದೆ ಶ್ರೀಮಂತರಾಗಬೇಕೆಂಬ ಆತುರತೆಯಲ್ಲಿರುವ ವ್ಯಾಪಾರಸ್ಥರ ವಿಶುದ್ಧ ಪ್ರಾಮಾಣಿಕತನವೇ ಇದಕ್ಕೆ ಯೋಗ್ಯ ಉಪಾಯವಾಗಿರುವದು.

ಹೊಸದಿಲ್ಲಿ ಮೋ. ಕ. ಗಾಂಧಿ

೮-೪-೪೬

## ಧಾರವಾಡ

ಗದುಗಿನಲ್ಲಿ ೫ ನೇ ತಾರೀಕು ರಾತ್ರಿ ಭಯಂಕರ ಸಿಡಿಲಿನ ಶಕೆ ತಾಗಿ ಅಲ್ಲಿನ ಪ್ರಾಥಮಿಕ ಶಿಕ್ಷಕರಾದ ಶ್ರೀ ಘಳಗಿಯವರ ಪತ್ನಿಗೆ ಗಾಯಗಳಾಗಿ ಮೂರು ದಿನಗಳ ನಂತರ ಅವರು ಮರಣಹೊಂದಿದರು.

ಧಾರವಾಡ ಕರ್ನಾಟಕ ಹೈಸ್ಕೂಲಿನಲ್ಲಿ ಇದೇ ೫ ನೇ ತಾರೀಕು ಶ್ರೀ ದಿವಾಕರರ ಹಸ್ತದಿಂದ ಕೈಗಾರಿಕೆ ವರ್ಗದ ಪ್ರದರ್ಶನ ಸಮಾರಂಭ ಜರುಗಿತು ಈ ವರ್ಗಕ್ಕೆ ಶ್ರೀಮತಿ ಸೌ. ತುಳಸಾಬಾಯಿ ಕೃಷ್ಣರಾವ ದೀಕ್ಷಿತ ವರ್ಗವೆಂದು ಹೆಸರಿಡಲಾಯಿತು. ಶ್ರೀ ದಿವಾಕರರು ಕೈಗಾರಿಕೆ ಶಿಕ್ಷಣದ ಬಗ್ಗೆ ಕೆಲ ಮಾತುಗಳನ್ನು ಹೇಳಿದರು. ಶ್ರೀ ದೀಕ್ಷಿತರು ಈ ವರ್ಗಕ್ಕೆ ೫೦೦ ರೂಪಾಯಿ ಕೊಟ್ಟಿರುವರು. ಇದೇ ಸಮಯದಲ್ಲಿ ಶ್ರೀಮತಿ ಕಮಲಾಬಾಯಿ ಜಮಖಂಡಿಯವರು ಕೆಲ ಉಪಯುಕ್ತ ಸೂಚನೆ ಮಾಡಿದರು.

ಹುಬ್ಬಳ್ಳಿಯಲ್ಲಿ ೯ ನೇ ತಾರೀಕು ಕಮರೀಪೇಟಿಯಲ್ಲಿ ರಾತ್ರಿ ೮-೧೫ ಗಂಟೆ ಸುಮಾರಿಗೆ ಓರ್ವ ಹುಡುಗನು ಮಸೀದೆಯ ಮುಂದೆ ಮೂತ್ರವಿಸರ್ಜನ ಮಾಡಿದನೆಂದು ಹಿಂದೂ ಮುಸಲ್ಮಾನರಲ್ಲಿ ಸಣ್ಣ ಸ್ವರೂಪದ ಗಲಭೆಯಾಯಿತು. ಎರಡೂ ಪಕ್ಷ ಕೂಡಿ ೧೫-೨೦ ಜನರಿಗೆ ಗಾಯಗಳಾಗಿವೆ. ಹೆಡ್ ಕ್ವಾರ್ಟರ್ಸದಿಂದ ಹೆಚ್ಚಿನ ಪೋಲೀಸರನ್ನು ತರಿಸಲಾಗಿದೆ. ಪರಿಸ್ಥಿತಿಯೀಗ ಶಾಂತವಿದೆ.

ಧಾರವಾಡ ಜಿಲ್ಹೆಯಲ್ಲಿ ಕಳೆದ ಒಂದು ತಿಂಗಳಿಂದ ಹತ್ತಿ ವ್ಯಾಪಾರ ನಿಂತಿದೆ. ನಿಯಂತ್ರಣಾಜ್ಞೆಯಲ್ಲಿ ಜಿಲ್ಹಾ ಮ್ಯಾಜಿಸ್ಟ್ರೇಟರು ಕೆಲ ತಿದ್ದುಪಡಿ ಮಾಡಿದ್ದರೂ ವ್ಯಾಪಾರಿಗಳಿಗೆ ಸಮಾಧಾನವಾಗಿಲ್ಲ. ವ್ಯಾಪಾರಸ್ಥರು ಈಗ ಮುಂಬಯಿ ಸರಕಾರದ ಮುಖ್ಯ ಸೆಕ್ರೆಟರಿಗಳ ಒಕ್ಕಲತನ ಹಾಗು ನಾಗರಿಕ ಪೂರೈಕೆ ಖಾತೆಯ ಕಾರ್ಯದರ್ಶಿಗಳಿಗೆ ಬಿನ್ನವಿಸಿಕೊಂಡಿದ್ದಾರೆ. ಒಕ್ಕಲತನ ಖಾತೆಯ ಡಾಯರೆಕ್ಟರರನ್ನು ಧಾರವಾಡದಲ್ಲಿ ಕಂಡು ತಮ್ಮ ದೂರುಗಳನ್ನು ತೋಡಿಕೊಂಡರು ಅವರು ವಿಚಾರ ಮಾಡುವುದಾಗಿ ಉತ್ತರಿಸಿದರು.

ಅಖಿಲ ಕರ್ನಾಟಕ ಏಕೀಕರಣ ಸಂಘದ ವಾರ್ಷಿಕ ಸಭೆ ಸೇರಿ ಶ್ರೀ ಜಿನರಾಜ ಹೆಗ್ಗಡೆ ಅಧ್ಯಕ್ಷ ಶ್ರೀ ದಿವಾಕರ, ದೊಡ್ಡಮೇಟಿ ಮತ್ತು ಪ್ರೊ. ಜಾಗಿರದಾರ ಇವರು ಉಪಾಧ್ಯಕ್ಷರು, ಶ್ರೀ ಮಂಗಳವೇಡೆ ಮತ್ತು ಕಾಂತೇಶರಾವ ಕಮಲಾಪುರ ಇವರು ಕಾರ್ಯದರ್ಶಿಗಳಾಗಿ ಆರಿಸಲ್ಪಟ್ಟರು. ಪೋಲೀಟೆಕ್ನಿಕ್ ಕಾಲೇಜಗಾಗಿ ೪ ಲಕ್ಷ ರೂ. ಧನ ಸಹಾಯ ಮಾಡಿದ ಶ್ರೀ ಭೂಮರೆಡ್ಡಿಯವರನ್ನಭಿನಂದಿಸಲಾಯಿತು.

ಹುಬ್ಬಳ್ಳಿಯ ಹಳೇ ಕಾಟನ್ ಮಾರ್ಕೆಟಿನ ಹತ್ತರ ವೀರಭದ್ರಪ್ಪಾ ವಡಕಪ್ಪಾ ಗೌರಣ್ಣವರ ಇವರು ಅಮೇರಿಕದ ಜೂಜಾಟ ಆಡಿದರೆಂದು ಅವರನ್ನು ಮತ್ತು ಚನವೀರಪ್ಪ, ಹನಮಂತಪ್ಪ ಎಂಬ ಇಬ್ಬರನ್ನು ಸೆರೆ ಹಿಡಿದಿದ್ದರು. ಸುಮಾರು ೪೯ ರೂಪಾಯಿಗಳು ಜಪ್ತ ಮಾಡಲ್ಪಟ್ಟವು. ವೀರಭದ್ರಪ್ಪನಿಗೆ ೬ ತಿಂಗಳ ಶಿಕ್ಷೆ, ೨೦೦ ರೂ. ದಂಡ ಕೊಡದಿದ್ದರೆ ಮತ್ತೆ ೩ ತಿಂಗಳ ಶಿಕ್ಷೆ ಉಳಿದ ಇಬ್ಬರಿಗೆ ೧೫ ರೂ. ದಂಡ ವಿಧಿಸಲಾಯಿತು.

ಹುಬ್ಬಳ್ಳಿ ಗಿರಣಿ ಕಾಮಗಾರ ಸಂಘದ ಸಂಘಟಕರಾದ ಶ್ರೀ ಸುಮಿತ್ರಗೌಡ ಪಾಟೀಲ ಮತ್ತು ಇನಸ್ಪೆಕ್ಟರ ಮಲ್ಲಪ್ಪಾ ದೇವಪ್ಪಾ ಇವರಿಗೆ ೬ ತಿಂಗಳ ಸಾದಾ ಶಿಕ್ಷೆ ವಿಧಿಸಲಾಯಿತು. ಪಿನಲ್ ಕೋಡಿನ ೩೪೨ ನೇ ಕಲ್ಮಿನನ್ವಯ ಅವರ ಮೇಲೆ ಖಟ್ಲೆ ಹಾಕಲಾಗಿತ್ತು.

ಧಾರವಾಡ ನಗರ ಸಭೆಯ ತ್ರೈವಾರ್ಷಿಕ ಚುನಾವಣೆಯಲ್ಲಿ ೮ ನೇ ವಾರ್ಡಿನಿಂದ ಆರಿಸಿ ಬಂದಿದ್ದ ಗಣಪತರಾವ ಜಾಧವ ಇವರಿಗಿಂತ ತಮಗೆ ಹೆಚ್ಚು ಮತ ಬಿದ್ದದ್ದರಿಂದ ತಮ್ಮನ್ನೆ ಆರಿಸಲಾಗಿದೆಂದು ಸಾರಬೇಕೆಂದು ಶ್ರೀ ರಘುನಾಥರಾವ ಜಹಾರ ವಕೀಲರು ಕೋರ್ಟಿನಲ್ಲಿ ವ್ಯಾಜ್ಯ ಹೂಡಿದ್ದರು ವಿಚಾರಣೆಯಲ್ಲಿ ಶ್ರೀ ಜಹಾರರಿಗೆ ನಾಲ್ಕು ಮತ ಹೆಚ್ಚು ಬಿದ್ದದ್ದು ಕಂಡು ಬಂದದ್ದರಿಂದ ಡಿ. ಜಜ್ಜರ, ಜಹಾರರು ಆರಿಸಿ ಬಂದಿದ್ದಾರೆಂದು ತೀರ್ಪು ಕೊಟ್ಟರು.

ಹುಬ್ಬಳ್ಳಿಯ ಕೃಷ್ಣಾಸಾ ಮೇತ್ರಾಣಿ ಹಾಗು ಪುರುಷೋತ್ತಮ ದೈವಜ್ಞ ಇವರಿಗೆ ಜೂಜಾಟದ ಬಗ್ಗೆ ೩೦ ದಿವಸ ಕಠಿನ ಶಿಕ್ಷೆ ಹಾಗು ಬೇರೆ ೧೨ ಜನರಿಗೆ ದಂಡ ವಿಧಿಸಿ ಉಳಿದ ಒಬ್ಬನನ್ನು ನಿರ್ದೋಷಿಯೆಂದು ಬಿಡುಗಡೆ ಮಾಡಲಾಯಿತ.

# ಕರ್ನಾಟಕ

ಹೊಸರಿತ್ತಿಯಲ್ಲಿ ಶ್ರೀ ಧೀರೇಂದ್ರ ಸ್ವಾಮಿಗಳ ಮಹಾಸಮಾರಾಧನೆಯ ಮಹೋತ್ಸವ ಫಾಲ್ಗುಣ ಶುದ್ಧ ೧೨ ರಿಂದ ಮೂರು ದಿನ ವಿಜೃಂಭಣೆಯಿಂದ ಸಾಂಗವಾಯಿತು. ಶ್ರೀಪಾದಪುತ್ರ ಹುಲಕುಂಟಿ ಅಚಾರ್ಯರೆ ಮೊದಲಾದ ಪಂಡಿತರು, ಅಸ್ತಿಕ ಮಹಾಶಯರು ಬಂದಿದ್ದರು. ಸವಣೂರರಲ್ಲಿ ಶ್ರೀ ಸತ್ಯಬೋಧ ಸ್ವಾಮಿಗಳ ಆರಾಧನೆ ಮಹೋತ್ಸವವೂ ವಿಜೃಂಭಣೆಯಿಂದ ಸಾಂಗವಾಯಿತು.

ಹಾವೇರಿ ತಾಲೂಕ ವಡವಿ ಗ್ರಾಮವು ಬರಗಾಲವೆಂದು ಸಾರಲಾಗಿದೆ. ಅಲ್ಲಿಯ ಆಣೇವಾರಿ ಐದಾಣೆಯಾಗಿದೆ. ಆ ಊರ ಪೂರ್ವಕ್ಕೆ ಸ್ವಲ್ಪ ಮಳೆಯಾಗಿ ನೆರಡಾಣೆ ಬೆಳೆ ಬಂದಿದೆ ಉಳಿದೆಡೆ ಮಳೆಯಾಗದ್ದರಿಂದ ಬೆಳೆ ಏನೂ ಬಂದಿಲ್ಲ ಹೀಗಿದ್ದರೂ ೬೫೦ ಚೀಲ ಧಾನ್ಯ ವಸೂಲಿ ಹಾಕಿದ್ದಾರೆ. ಗೌಡ-ಕುಲಕರ್ಣಿಯವರು ಇದರ ವಸೂಲಿ ಮಾಡಹತ್ತಿರುವರೆಂದು ತಿಳಿಯುತ್ತದೆ. ಸದ್ಯದ ಕನಿಷ್ಟ ಕಾಲದಲ್ಲಿ ಹೀಗೆ ಧಾನ್ಯ ವಸೂಲಿಗಾಗಿ ತೊಂದರೆ ಕೊಡಬಾರದೆಂದು ಜನರು ಮೇಲಧಿಕಾರಿಗಳಿಗೆ ಕೇಳಿಕೊಂಡಿದ್ದಾರೆ.

ಧಾರವಾಡ ಕನ್ನಡ ಸಂಶೋಧನಾತ್ಮಕ ಉಪನ್ಯಾಸ ಮಾಲೆಯ ಪ್ರಾರಂಭ ಕೊಲ್ಹಾಪುರ ರಾಜಾರಾಮ ಕಾಲೇಜಿನ ಪ್ರಾಧ್ಯಾಪಕರಾದ ಪ್ರೊ. ಉಪಾಧ್ಯಾಯ ಇವರ ಹಸ್ತದಿಂದ ಕಳೆದ ವಾರ ಪ್ರಾರಂಭವಾಯಿತು. ಅವರು ಕವಿ ಪುಷ್ಪದಂತನ ಬಗ್ಗೆ ಮಾತಾಡಿದರು.

ಹೊಸರಿತ್ತಿಯಲ್ಲಿ ಹಪ್ತೆ ಬಂದೂಕ ಕದಿಯಲೆತ್ನಿಸಿದ ಆರೋಪದ ಮೇಲೆ ಭೀಮರಡ್ಡಿ ಜಟ್ಟೆಪ್ಪನವರ ಇವರನ್ನು ಸೆರೆ ಹಿಡಿದು ಹಾವೇರಿ ಸಬ್ ಜೇಲಿನಲ್ಲಿಟ್ಟಿದ್ದಾರೆ.

ಬುಧಗಾಂವ ಶಿರಹಟ್ಟಿ ಸಂಸ್ಥಾನಗಳಲ್ಲಿ ಹಪ್ತೆ ಕಸಿದ ಮತ್ತು ಚಾವಡಿ ಸುಟ್ಟ ಖಟ್ಲೆಯಲ್ಲಿ ನಿರ್ದೋಷಿಯೆಂದು ಆರೇಳು ತಿಂಗಳಗಳ ಹಿಂದೆ ಇವರು ಬಿಡುಗಡೆ ಹೊಂದಿದ್ದರು. ಇದೇ ೩ ನೇ ತಾರೀಕು ಹಾವೇರಿ ರೆಸಿಡೆಂಟ ಮ್ಯಾಜಿಸ್ಟ್ರೇಟ ಕೋರ್ಟಿನಲ್ಲಿ ಇವರ ಖಟ್ಲೆ ಪ್ರಾರಂಭವಾಗಿದೆ.

ಗದುಗಿನ ಎಸ್. ಸಿ. ಮಿಲ್ಲಿನ ಕೆಲಸಗಾರರಿಗೆ ಉಳಿದ ಕಡೆಯಲ್ಲಿಯ ಕೆಲಸಗಾರರಂತೆ ಹೆಚ್ಚಿನ ಸೀದಾ ಕೊಡುತ್ತಿರುವದಿಲ್ಲ. ಇದಕ್ಕಾಗಿ ಇಲ್ಲಿಯ ಸ್ಥಾನಿಕ ಅಧಿಕಾರಿಗಳನ್ನು ಕಂಡು ದೂರು ಹೇಳಿಕೊಂಡರು ಆದರೆ ಅದರಿಂದ ಏನೂ ಪ್ರಯೋಜನವಾಗಿಲ್ಲ. ಈಗ ಮುಂಬಯಿ ಸೀದಾ ನಿಯಂತ್ರಣಾಧಿಕಾರಿಗಳಿಗೆ ಈ ಬಗ್ಗೆ ಬಿನ್ನವಿಸಿಕೊಂಡಿದ್ದಾರೆಂದು ತಳಿಯುತ್ತದೆ.

## ವಿಜಾಪುರ

ವಿಜಾಪೂರ ವಿಜಯ ಕಾಲೇಜಿನ ಪ್ರಿನ್ಸಿಪಾಲ ಭೂಷಣರನ್ನು ಕೆಲಸದಿಂದ ಮುಕ್ತ ಮಾಡಲಾಗಿದೆ ಅವರ ಅನುಯಾಯಿಗಳಾಗಿದ್ದ ಮೂವರು ಲೆಕ್ಚರರು ರಾಜೀನಾಮೆ ಕಳಿಸಿದ್ದಾರೆ. ಮತ್ತು ಅವರಿಂದ ನೇಮಕರಾಗಿದ್ದ ಮೂವರ, ತಾತ್ಪೂರ್ತಿಕ ಶಿಪಾಯರು ಕೆಲಸ ಬಿಟ್ಟಿರುತ್ತಾರೆಂದು ವಿಜಾಪೂರ ಜಿಲ್ಹಾ ಲಿಂಗಾಯತ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ. ಸಜ್ಜನರು ಪ್ರಕಟಿಸುತ್ತಾರೆ.

ಬಾಗಲಕೋಟೆಯಲ್ಲಿ ಮುನಿಸಿಪಾಲಿಟಿ ಸದಸ್ಯರೂ ಅಸಿಸ್ಟಂಟ ರಿಕ್ರೂಟಿಂಗ ಆಫೀಸರರೂ ಆಗಿರುವ ಶಿಂದೆಯವರು, ಮುನಿಸಿಪಾಲಿಟಿಯ ಹಿಂದಿನ ಅಧ್ಯಕ್ಷರೂ ಸದ್ಯದ ಸದಸ್ಯರೂ ಆಗಿರುವ ಶ್ರೀ. ಸೊಲ್ಲಾಪಟ್ಟಿ ರಾಮಣ್ಣನಾಯಿಕರ ಮನೆಗೆ ಹೋಗಿ ಎರಡು ಗುಂಡು ಹಾರಿಸಿದರು. ಆದರೆ ಸುದೈವದಿಂದ ಎರಡೂ ಗುಂಡುಗಳು ಅವರಿಗೆ ತಾಗಲಿಲ್ಲ. ಅಷ್ಟರಲ್ಲಿ ಅದೇ ದಾರಿಯಿಂದ ಹೋಗುತ್ತಿದ್ದ ಶ್ರೀ ಸುಗುಣೇಂದ್ರ ಕೆರೂರ ಇವರು ಶಿಂದೆಯವರನ್ನು ಹಿಡಿದರು. ಪೋಲೀಸರು ಅವರನ್ನು ಸೆರೆ ಹಿಡಿದು ಬಂದೂಕು ಜಪ್ತ ಮಾಡಿಕೊಂಡು ಹೋಗಿರುವರು. ಶಿಂದೆಯವರು ಈಗ ಜಾಮೀನ ಮೇಲೆ ಬಿಡುಗಡೆ ಹೊಂದಿದ್ದಾರೆ.

## ಬೆಳಗಾವಿ

ಬೆಳಗಾವಿಯ ಕಲೆಕ್ಟರರಾದ ಶೀಲ್ಡ್ಸ ಸಾಹೇಬರು ರಜೆಯ ಮೇಲೆ ಹೋದ್ದರಿಂದ ಪತ್ರಿಕಾ ಪ್ರತಿನಿಧಿಗಳು ಅವರನ್ನು ಬೀಳ್ಕೊಡುವ ಸಭೆಸೇರಿಸಿದ್ದರು. ಜೋಗಳೇಕರ ಮತ್ತು ಠಾಕೂರರು ಅವರ ಗುಣಗಾನಮಾಡಿ ಅವರು ನಡೆಸಿಕೊಂಡು ಬಂದ ಪತ್ರಿಕಾ ಸುದ್ದಿಗಾರರ ಸಭೆಗಾಗಿ ಅವರನ್ನಭಿನಂದಿಸಿದರು. ಕಲೆಕ್ಟರರು ಬೇಗನೆ ಹಿಂದುಸ್ತಾನ ಸ್ವತಂತ್ರವಾಗುವದು ಸ್ವತಂತ್ರ ಭಾರತದಲ್ಲಿ ನಾನು ಬೆಳಗಾವಿಗೆ ಭೆಟ್ಟಿ ಕೊಡುವೆನೆಂದು ಮುಂತಾಗಿ ಹೇಳಿದರು.

ಬೆಳಗಾವಿಯಲ್ಲಿ ಸ್ಟೇಶನದ ಹತ್ತರ ಇರುವ ಶ್ರೀ ಗೋಟಖಿಂಡಿಯವರ ಮೋಟರಮನೆಗೆ ಬೆಂಕಿ ಹತ್ತಿ ಅದರೊಳಗಿನ ವಸ್ತುಗಳೆಲ್ಲ ಮೋಟರ ಸಹಿತ ಸುಟ್ಟು ಭಸ್ಮವಾಗಿರುವವು. ಸುಮಾರು ೧೦-೧೫ ಸಾವಿರ ರೂಪಾಯಿ ಹಾನಿಯಾಗಿದೆ.

ಬೈಲಹೊಂಗಲದಲ್ಲಿ ೩ ನೇ ತಾರೀಕಿನ ದಿನ ಚನ್ನಮ್ಮರಾಣಿಯ ಸ್ಮಾರಕೋತ್ಸವ ನಿಮಿತ್ತ ಪ್ರಚಂಡ ಮೆರವಣಿಗೆ ಹೊರಟು ನಗರದ ಬೀದಿಗಳನ್ನೆಲ್ಲ ತಿರುಗಿ ಸಾಯಂಕಾಲ ಕಲ್ಮಠದಲ್ಲಿ ಶ್ರೀ ಬಾಳೀ ವಕೀಲರ ಅಧ್ಯಕ್ಷತೆಯಲ್ಲಿ ಸೇರಿದ ಸಭೆಯಲ್ಲಿ ಪ್ರಮುಖರ ಭಾಷಣಗಳಾದವು. ರಾಣಿಯ ಭಾವಚಿತ್ರದ ಮೆರವಣಿಗೆ ಆನೆಯ ಮೇಲೆ ಆಯಿತು ಮಳೆಯ ಮೂಲಕ ಕೆಲ ಕಾರ್ಯ ತಡೆಹಿಡಿಯಲ್ಪಟ್ಟವು.

ಶ್ರೀ ದೇಶಪಾಂಡೆ ಗಂಗಾಧರರಾಯರಿಗೆ ಇದೇ ಬುಧವಾರ ೧೦ನೇ ತಾರೀಕಿಗೆ ೭೫ ವರ್ಷ ಮುಗಿದದ್ದರಿಂದ ಹುದಲಿಯಲ್ಲಿ ಉತ್ಸವವನ್ನು ಆಚರಿಸಲಾಯಿತು. ಪ್ರಭಾತಫೇರಿ, ಧ್ವಜವಂದನ, ಸೂತ್ರಯಜ್ಞ ಮತ್ತು ಸಾಯಂಕಾಲ ಮೆರವಣಿಗೆ ರಾತ್ರಿ ಸಭೆ ಮೊದಲಾದ ಕಾರ್ಯಕ್ರಮಗಳಾದವು.

ಗಂಗಾಧರರಾಯರ ಪ್ರಕೃತಿ ಸ್ವಲ್ಪ ಅಸ್ವಸ್ಥವಾದುದರಿಂದ ಹುಕ್ಕೇರಿಯ ಆರೋಗ್ಯಧಾಮದಲ್ಲಿ ವಿಶ್ರಾಂತಿ ಪಡೆಯುತಿದ್ದರು ಅದರೀಗ ಪ್ರಕೃತಿ ಗುಣವಾದ್ದರಿಂದ ಮತ್ತೆ ಬೆಳಗಾವಿಗೆ ಬಂದಿದ್ದಾರೆ.

## ಉತ್ತರ ಕನ್ನಡ

ಅಖಂಡ ಕರ್ನಾಟಕಕ್ಕೆ ಒಂದು ಉಚ್ಚ ಆದರ್ಶ ಶಿಕ್ಷಣ ಕೇಂದ್ರವನ್ನು ಒದಗಿಸಿಕೊಡುವ ಉದ್ದೇಶದಿಂದ ಕುಮಟೆಯಲ್ಲಿ ಒಂದು ಮಹಾ ವಿದ್ಯಾಲಯ ಸ್ಥಾಪಿಸುವ ಯತ್ನ ನಡೆದಿದೆ. ಮೊದಲು ಕಲೆ ಮತ್ತು ವಿಜ್ಞಾನ ಶಾಖೆಯಿಂದ ಪ್ರಾರಂಭಿಸಿ ಬಳಿಕ ಒಕ್ಕಲತನ ಔದ್ಯೋಗಿಕ ಅರಣ್ಯಕ, ವಾತ್ಸಿಕ ಮೊದಲಾದ ವಿವಿಧ ಶಾಖೆಗಳಲ್ಲಿ ಶಿಕ್ಷಣ ದೊರೆವ ಏರ್ಪಾಡು ಮಾಡಲಾಗುವದು. ಈ ಯೋಜನೆಗೆ ಈಗಾಗಲೆ ೧ ಲಕ್ಷ ರೂಪಾಯಿ ಕೂಡಿದ್ದು ಇನ್ನೂ ನಾಲ್ಕೈದು ಲಕ್ಷ ರೂಪಾಯಿ ಕೂಡಿಸಲಿರುವರು. ಎಂ. ಎನ್. ಕುಲಕರ್ಣಿಯವರು ಈಗಾಗಲೆ ೧೦ ಸಾವಿರ ರೂಪಾಯಿ ಕೊಟ್ಟಿದ್ದು ವಿದ್ಯಾಲಯಕ್ಕೆ ತಮ್ಮ ಅಣ್ಣಂದಿರ ಹೆಸರಿಡುವದಾದರೆ ಇನ್ನೂ ೩೦ ಸಾವಿರ ರೂಪಾಯಿ ಕೊಡುವದಾಗಿ ಹೇಳಿದ್ದಾರೆ.

ಶಿರ್ಶಿಯ ಕಲ್ಮೇಶ್ವರ ದೇವಸ್ಥಾನದಲ್ಲಿ ಮಹಾರುದ್ರ ಯಾಗವು ವಿಜೃಂಭಣೆಯಿಂದ ನಡೆಯಿತು. ಅನೇಕ ವಿದ್ವಾಂಸರ ಭಾಷಣಗಳೂ ಆದವು.

ಗ್ರಾಮ ಸುಧಾರಣಾ ಕಾರ್ಯದ ಬಗ್ಗೆ ಇದ್ದ ಸರ್ ಫ್ರೆಡ್ರಿಕ್ ಸಾಯಿಕ್ಸ ಢಾಲು ಸಿದ್ದಾಪೂರಿನ ಅವರ ಗುಪ್ಪಾ ಗ್ರಾಮಕ್ಕೆ ದೊರೆತಿದೆಯಷ್ಟೆ. ಅದನ್ನು ಸಮರ್ಪಿಸುವ ಸಮಾರಂಭ ಮಾಮಲೇದಾರರಿಂದ ನಡೆಯಿತು.

ಹಾವೇರಿಯಲ್ಲಿ ಸಬ್ ಜಜ್ಜರಾಗಿದ್ದ ಶ್ರೀ ಸೀತಾರಾಮ ನಾರಾಯಣಭಟ್ಟ ಅಕ್ಕದಾಸ ಇವರು ಕಳೆದ ಸೋಮವಾರ ಬೆಂಗಳೂರಿನಲ್ಲಿ ಹೃದಯಕ್ರಿಯೆ ನಿಂತು ಸ್ವರ್ಗಸ್ಥರಾದರು. ಇವರು ಮೂಲತಃ ಸಿರಸಿಯವರು ಸರಳವೃತ್ತಿಯವರೂ ರಾಷ್ಟ್ರೀಯ ಭಾವನೆಯವರೂ ಆಗಿದ್ದರು ಇವರಿಗೆ ಪರಮಾತ್ಮ ಚಿರಶಾಂತಿಯನ್ನೀಯಲಿ.

ಸಿದ್ದಾಪೂರ ತಾಲೂಕಿನ ಸುಪಗೋಡ ಭದ್ರಕಾನ, ಕೊಡಗಿ ಬೈಗ್ರಾಮಗಳಲ್ಲಿ ಸುಮಾರು ೬ ಮೈಲು ವಿಸ್ತೀರ್ಣ ಪ್ರದೇಶದಲ್ಲಿ ನರಭಕ್ಷಕ ಹುಲಿಯ ಹಾವಳಿ ಹೆಚ್ಚಿದೆ. ಯಾರಾದರೂ ಈ ಹುಲಿ

## ಬಳ್ಳಾರಿ

ಶ್ರೀ ಹರಿರಾಯರು ಮದ್ರಾಸ ಸರಕಾರ ಮತ್ತು ಜೇಲ ಅಧಿಕಾರಿಗಳ ಮೇಲೆ ಮಾಡಿದ ಮಾನಹಾನಿ ಮೊಕದ್ದಮೆಯಲ್ಲಿ ಜಿಲ್ಹಾ ನ್ಯಾಯಾಧೀಶರು ಜೇಲ ಅಧಿಕಾರಿಗಳನ್ನು ದೋಷಮುಕ್ತ ಮಾಡಿ ಸರಕಾರದ ಅಲಕ್ಷದಿಂದ ಅಪರಾಧ ಸಂಭವಿಸಿದ್ದರಿಂದ ಅವರು ೧೦೨೦ ರೂಪಾಯಿ ಮಾನನಷ್ಟ ಪರಿಹಾರ ಕೊಡಬೇಕೆಂದು ತೀರ್ಪು ಕೊಟ್ಟಿರುವರು.

ಹೇಮಕೂಟ ಪ್ರಾಂತದ ದೇವಾಂಗ ಸಮಾಜದ ಸ್ಥಾಪನೆಯಾಗಿ ಒಂದುತಿಂಗಳಾಯಿತು ಈ ಅತ್ಯಲ್ಪ ಅವಧಿಯಲ್ಲಿಯ ಉಚಿತ ಭೋಜನ ಅನ್ನಸಂತರ್ಪಣೆಯ ಕಾರ್ಯ ಕೈಕೊಳ್ಳಲಾಗಿದೆ. ಹಂಪೆಯ ಜಾತ್ರೆಗಾಗಿ ಬರುವ ದೇವಾಂಗ ಯಾತ್ರಿಕರಿಗೆ ಈ ಮಠದಲ್ಲಿ ಮೂರು ದಿನ ಉಚಿತಭೋಜನ ಮಾಡಿಸಲಾಗುವದು.

## ಕನ್ನಡ ಸಂಸ್ಥಾನ

ಚಿತ್ರದುರ್ಗ ಜಿಲ್ಹಾ ಸಮ್ಮೇಳನ ಜಿಲ್ಹಾ ಬೋರ್ಡ ಭವನದಲ್ಲಿ ತಾ. ೭—೮ ಕ್ಕೆ ವ್ಯವಸಾಯ ಮಂತ್ರಿ ಶ್ರೀ ಎಂ. ಎ. ಶ್ರೀನಿವಾಸನ್ ಇವರ ಅಧ್ಯಕ್ಷತೆಯಲ್ಲಿ ನಡೆಯಿತು. ಶ್ರೀ ಕೊಂಡಜಿ ಬಸಪ್ಪನವರು ಸ್ವಾಗತ ಭಾಷಣ ಮಾಡಿದ ಬಳಿಕ ಅಧ್ಯಕ್ಷರ ಭಾಷಣವಾಯಿತು. ಸಮ್ಮೇಲನದಲ್ಲಿ ಹಲವು ಗೊತ್ತುಗಳು ಸ್ವೀಕೃತವಾದವು. ಕ್ಷಾಮಪೀಡಿತ ಜಿಲ್ಹೆಯೆಂದು ಸಾರಿರೆಂದೂ ಆಹಾರ ಹಂಚಿಕೆಗಾಗಿ ಒಬ್ಬ ಸೀದಾಧಿಕಾರಿಯನ್ನು ನಿಯಮಿಸಿರೆಂದೂ ಕೇಳಿಕೊಳ್ಳಲಾಯಿತು.

ನಿಜಾಮ ಸರಕಾರದವರು ಮೀಜಾನ ಎಂಬ ಉರ್ದು ದಿನಪತ್ರಿಕೆಗೆ ಎರಡುಸಾವಿರ ರೂಪಾಯಿ ಜಾಮೀನ ಕೇಳಿದ್ದಾರೆ.

ಲಕ್ಷ್ಮೇಶ್ವರ ನಗರ ಸಭೆಯ ಸಭೆ ಸೇರಿ ಶ್ರೀ ಬಳೆಟ್ಟೆಪ್ಪ ತಟ್ಟಿಯವರು ಅಧ್ಯಕ್ಷರು ಕುಪ್ಪದ ವಕೀಲರು ಉಪಾಧ್ಯಕ್ಷರಾಗಿ ಆರಿಸಲ್ಪಟ್ಟಿರುವರು.

ರಾಮಪುರದಲ್ಲಿ ಓರ್ವ ಹೆಣ್ಣುಮಗಳ ಮೇಲೆ ಅತ್ಯಾಚಾರ ಮಾಡಿದ್ದಕ್ಕೆ ಜಮಖಂಡಿಯ ಒಬ್ಬ ಪೋಲೀಸನನ್ನ ಕೆಲ ಜನರು ಗಿಡಕ್ಕೆ ಕಟ್ಟಿಹಾಕಿದ್ದರು ಇದರ ಪರಿಣಾಮವಾಗಿ ಊರಲ್ಲಿ ೨೦ ಜನರನ್ನು ಬಂಧಿಸಲಾಗಿದೆ.

ಮಾಲಿಂಗಪುರದಲ್ಲಿ ೨ ನೇ ತಾರೀಕು ರಾತ್ರಿ ಹರಿಜನ ವಸತಿಯಲ್ಲಿ ಕೆಲ ಗುಡಿಸಲುಗಳಿಗೆ ಬೆಂಕಿ ಹತ್ತಿದ್ದರಿಂದ ಸೇವಾದಲದ ಸೈನಿಕರು ಅಗ್ನಿಗೆ ಹೋಗಿ ಬಾಲಕರನ್ನು ಮತ್ತು ಸಾಮಾನುಗಳನ್ನು ಹೊರದೆಗೆದು ಬೆಂಕಿಯನ್ನು ನಂದಿಸಿದರು. ಸುಮಾರು ಸಾವಿರ ರೂಪಾಯಿಯಷ್ಟು ಹಾನಿಯಾಗಿರಬಹುದು. ಸೇವಾದಲದವರು ಅವರಿಗೋಸ್ಕರ ನಿಧಿ ಕೂಡಿಸುವವರಿದ್ದಾರೆ.

ತುಂಗಭದ್ರಾ ನೀರಾವರಿ ಯೋಜನೆಗಳ ಬಗ್ಗೆ ಆಯಾ ಪ್ರಾಂತಿಕ ಹಾಗು ಸಂಸ್ಥಾನ ಸರಕಾರಗಳಲ್ಲಿ ಒಡಂಬಡಿಕೆಯಾಗಿದೆಂದು ತಿಳಿಯುತ್ತದೆ. ಲಕ್ಕವಳ್ಳಿಯ ಮತ್ತು ಸಕ್ರೆಬೈಲಿನ ಯೋಜನೆಗಳೀಗ ಮೈಸೂರ ಸರಕಾರದ ಮುಂದಿರುವವು. ಲಕ್ಕವಳ್ಳಿ ಯೋಜನೆ ೮ ಕೋಟಿ ರೂಪಾಯಿಗಳದಿದ್ದು ಇದರಿಂದ ೨ ಲಕ್ಷ ಎಕರೆ ಭೂಮಿಗೆ ನೀರುಣ್ಣುವದು ಸಕ್ಕರೆಬಯಲ ಯೋಜನೆ ೭೫ ಲಕ್ಷ ರೂಪಾಯದಿದ್ದು ಇದರಿಂದ ೨೭ ಸಾವಿರ ಎಕರೆ ಭೂಮಿಗೆ ನೀರು ಸಿಕ್ಕುವದು.

ದಾಮೋದರ ಅಣೆಕಟ್ಟಿನ ಯೋಜನೆಯ ಶಿಷ್ಟಮಂಡಳದವರು ಮೈಸೂರಿಗೆ ಬಂದಿರುವರು. ಅವರು ಕೃಷ್ಣರಾಜಸಾಗರ ಅಣೆಕಟ್ಟನ್ನು ನೋಡಿ ಆ ಬಗ್ಗೆ ತಮ್ಮ ಸದಭಿಪ್ರಾಯವನ್ನು ವ್ಯಕ್ತಪಡಿಸಿದರು. ಮೆಟ್ಟೂರ ಅಣೆಕಟ್ಟನ್ನು ನೋಡಿಕೊಂಡು ಅವರು ಮರಳಿ ಕಲಕತ್ತೆಗೆ ಹೋಗುವರು ಬಂಗಾಲದಲ್ಲಿ ಮಹಾಪೂರಗಳಾಗದಂತೆ ಉಪಾಯಗಳನ್ನು ಸೂಚಿಸಲು ಈ ಶಿಷ್ಟಮಂಡಲದವರನ್ನು ಕೇಳಿಕೊಳ್ಳಲಾಗಿದೆ. ೧೨ ಅಣೆಕಟ್ಟುಗಳುಳ್ಳ ದಾಮೋದರ ಯೋಜನೆಯಿಂದ ನೀರಾವರಿ ಉಪಯೋಗವನ್ನೂ ಎಂತು ಮಾಡಬಹುದೆಂಬದನ್ನೂ ಅವರು ಸೂಚಿಸಲಿರುವರು.

---

ಕೊಂದರೆ ಬಂದೂಕ ಇಲ್ಲವೆ ಪಿಸ್ತೂಲ ಪರವಾನಿಗೆ ಇರುವವರಿಗೆ ೧೦೦ ರೂಪಾಯಿ ಇನಾಮು ಕೊಡುವದಾಗಿ ಜಿಲ್ಹಾಧಿಕಾರಿಗಳು ಸಾರಿದ್ದಾರೆ.

# ಹಿಂದುಸ್ತಾನ

## ಮುಂಬಯಿ

ಜನತಾಶಿಕ್ಷಣ ಸಂಸ್ಥೆಯವರು ಮುಂಬಯಿಯಲ್ಲಿ ಮುಂದಿನ ಜೂನ ತಿಂಗಳಿಂದ ಮೊದಲನೆ ದರ್ಜೆಯ ಕಾಲೇಜೊಂದನ್ನು ಸ್ಥಾಪಿಸಲಿದ್ದಾರೆ. ಕೇಂದ್ರ ಸರಕಾರದಿಂದ ಇದಕ್ಕಾಗಿ ೯ ಲಕ್ಷ ರೂ ಧನಸಹಾಯ ಸಿಕ್ಕಿದೆ. ಈ ಸಂಸ್ಥೆಗೆ ಡಾ. ಅಂಬೇಡಕರರು ಚೆಅರಮನ್‌ರು. ಪ್ರೊ. ಎ. ಬಿ. ಗಜೇಂದ್ರಗಡಕರರು ಪ್ರಿನ್ಸಿಪಾಲರು.

ಮುಂಬಯಿ ಕಾಂಗ್ರೆಸ್ ಮಂತ್ರಿಮಂಡಳದವರು ಅಧಿಕಾರ ಸ್ವೀಕರಿಸಿದ ಕೂಡಲೆ ಸಾತಾರೆ ಜಿಲ್ಹೆಯಲ್ಲಿಯ ಸ್ಥಾನಬದ್ಧರನ್ನು ಹೊರತು ಪಡಿಸಿ ಉಳಿದೆಲ್ಲ ಸ್ಥಾನಬದ್ಧರ ಬಿಡುಗಡೆಯ ಹುಕುಮು ಹೊರಡಿಸಿದ್ದರಿಂದ ಎಲ್ಲರೂ ಬಿಡುಗಡೆಯಾಗಿ ಬಂದಿರುವರು.

ಹಿಂದುಸ್ತಾನದಲ್ಲಿಯ ಕ್ಯಾಥಲಿಕ್‌ರ ರಾಷ್ಟ್ರೀಯ ಪರಿಷತ್ತು ಮುಂಬಯಿಯಲ್ಲಿ ಬೇಗನೆ ಕೂಡಲಿದೆ. ಮದ್ರಾಸದ ಹಿಂದಿನ ಕಾಂಗ್ರೆಸ್ ಮಂತ್ರಿಮಂಡಲದಲ್ಲಿ ಶಿಕ್ಷಣಮಂತ್ರಿಗಳಾಗಿದ್ದ ಮಂಗಳೂರಿನ ಶ್ರೀ ಸಿ. ಜೆ. ವರ್ಕಿಯವರು ಅಧ್ಯಕ್ಷತೆ ವಹಿಸಲಿದ್ದಾರೆ. ಉದ್ಘಾಟನೆ ಮಾಡಲು ಮಾನ್ಯ ಖೇರರನ್ನು ಕೇಳಿಕೊಳ್ಳಲಾಗಿದೆ.

ಹಿಂದೂ ಮಹಾಸಭೆಯ ಹಿಂದಿನ ಅಧ್ಯಕ್ಷರಾದ ಶ್ರೀ ವಿ ಡಿ ಸಾವರಕರ ಇವರು ಹವೆ ಬದಲು ಮಾಡುವದಕ್ಕಾಗಿ ಈಗ ಪುಣೆಗೆ ಬಂದಿರುವರು. ಕಳೆದ ಮೂರು ತಿಂಗಳುಗಳಿಂದ ಅವರು ಕಾಯಿಲೆಯಿಂದ ಇರುವರು.

ನೇವಾಸೆಯಲ್ಲಿ ಜನರು ತಡೆದಿಟ್ಟದ್ದ ೧೦೦ ಗೋದಿ ಚೀಲಗಳನ್ನು ಸರಕಾರಕ್ಕೆ ಕೊಡುವದಿದೆ. ಅವುಗಳ ಬದಲು ೫೦೦ ಚೀಲ ಶೆಜ್ಜಿ ರೈತರಿಗೆ ಸಿಕ್ಕತಕ್ಕದ್ದೆಂದು ಗೊತ್ತಾಗಿದೆ. ಕಾಂಗ್ರೆಸ ಸಮಿತಿಯವರ ಪ್ರಯತ್ನದಿಂದ ಈ ಬಗೆಯ ಒಡಂಬಡಿಕೆಯಾಗಿದೆ.

ಅಕ್ರಮ ರೀತಿಯಿಂದ ಸಂಪು ಸಾರಿ ಕೆಲಸಗಾರರು ಸರಕಾರದ ಸಹಾಯವನ್ನು ಕೋರಿದ್ದಾದರೆ ಅವರಿಗೆ ಯಾವ ಬಗೆಯ ಸಹಾಯವೂ ಸಿಕ್ಕಲಾರದೆಂದು ಕೂಲಿಕಾರ ಮಂತ್ರಿ ಗುಲಜರಿಲಾಲನಂದಾ ಇವರು ಕೂಲಿಕಾರ ಶಿಷ್ಟಮಂಡಳದವರಿಗೆ ಉತ್ತರ ಕೊಟ್ಟರು.

ಬಾಂದ್ರಾ ಮತ್ತು ಕುರ್ಲಾ ವಧಾಲಯಗಳಲ್ಲಿ ವಾರಕ್ಕೆ ಕೇವಲ ೩೪೧೧೬ ದನಗಳ ಸಂಹಾರ ನಡೆಯಬೇಕೆಂದು ಸರಕಾರದವರು ನಿರ್ಬಂಧ ಪಡಿಸಿದ್ದಾರೆ. ಇವುಗಳಲ್ಲಿ ೧೫೪೪೫ ಕುರಿ ೧೦೨೪ ಆಡು ೧೭೬೪ ಗೋಣಗಳು ಉಳಿದವುಗಳು ಎಮ್ಮೆಗಳೂ ಮಾತ್ರ ಕೊಲ್ಲಲ್ಪಡಬೇಕು ಎಪ್ರಿಲ ೭ ರಿಂದ ಈ ಹುಕುಮು ಜಾರಿಯಲ್ಲಿ ಬಂದಿದೆ.

## ಮದ್ರಾಸ

ತ್ರಾವಣಕೋರದಲ್ಲಿ ಕೆಲ ಅಪರಾಧಗಳ ಬಗ್ಗೆ ದೇಹಾಂತ ಶಾಸನವು ಇನ್ನು ಮುಂದೆ ರದ್ದು ಮಾಡಲ್ಪಟ್ಟದೆಂಬ ಘೋಷಣೆಯನ್ನು ಮ. ಹಾ ರಾಜರು ಒಂದು ಜಾಹೀರನಾಮೆ ಹೊರಡಿಸಿ ಮಾಡಿದ್ದಾರೆ. ಕಳೆದ ವರ್ಷ ದೇಹಾಂತ ಶಿಕ್ಷೆ ವಿಧಿಸಲ್ಪಟ್ಟದ್ದ ಮೂವರು ಈ ಹೊಸ ಜಾಹೀರನಾಮೆಯಿಂದ ಜೀವದಾನಪಡೆಯ ಈ ಮೂವರ ಶಿಕ್ಷೆಯನ್ನೀಗ ಜೀವಾವಧಿ ಮಾಡಲಾಗಿದೆ.

ಮಲಬಾರ ಮೇಲ ಪತ್ರಿಕೆಯ ಸಂಪಾದಕರೂ ಕೇರಳ ಕ್ಯಾಥಲಿಕ್ ಕಾಂಗ್ರೆಸ್ ಕಮೀಟಿಯ ಅಧಿಕಾರಿಗಳೂ ಆಗಿರುವ ಜೋಸೆತನೇದು ಕುಕಿನ್ನ ಇವರನ್ನು ಕೋಚೀನ ಸಂಸ್ಥಾನದಿಂದ ಹೊರಗೆ ಹಾಕಿರುವರು ಚೇಶಿಯನ್ ಮಂಜೂರಾ ಇವರನ್ನು ಕೋಚೀನದಲ್ಲಿ ಸ್ಥಾನಬದ್ಧ ಮಾಡಿರುವರು.

ಮದ್ರಾಸ ವಿಶ್ವವಿದ್ಯಾನಿಲಯದ ಪರವಾಗಿ ಕಾಂಗ್ರೆಸ್ಸಿನ ಟಿ. ಭಾಷ್ಯಂ ಇವರು ೪೧೧೫ ಮತಪಡೆದು ಮದ್ರಾಸ ಶಾಸನ ಸಭೆಗೆ ಆರಿಸಿ ಬಂದಿರುವರು. ಪ್ರತಿಸ್ಪರ್ಧಿ ಡಾ. ಎ. ಕೆ. ಪಿಳ್ಳೆ ಇವರಿಗೆ ೪೨೯ ಮತ್ತು ಪಿ. ನಾರಾಯಣ ಇವರಿಗೆ ೬೮ ಮತಗಳು ಬಿದ್ದು ಇಬ್ಬರ ಠೇವೂ ಜಪ್ತಾಯಿತು. ಈ ವರೆಗೆ ಕಾಂಗ್ರೆಸ್ಸಿಗೆ ೧೬೫ ಸ್ಥಳ ದೊರೆತಿವೆ ಒಟ್ಟು ೨೧೫ ಸ್ಥಳ ಶಾಸನ ಸಭೆಯಲ್ಲಿರುವವು

ಕುಲಶೇಖರಪಟ್ಟಣ ದೊಂಬಿ ಖಟ್ಲೆಯ ೯ ಆರೋಪಿಗಳಲ್ಲಿ ೭ ಆರೋಪಿಗಳ ಬಿಡುಗಡೆ ಮಾಡಲು ಸರಕಾರದವರು ವಿಧಿಸಿದ್ದಾರೆ. ಇನ್ನಿಬ್ಬರು [illegible] ಮತ್ತು ಕಾಶಿರಾಜನ್ ಇವರ ದೇಹಾಂತ ಶಿಕ್ಷೆಯನ್ನು ಈಗಾಗಲೆ ಜೀವಾವಧಿಗಿಳಿಸಿದ್ದು ಇವರ ಬಿಡುಗಡೆ ಮಾಡಲಾಗುವದಿಲ್ಲೆಂದು ತಿಳಿಯುತ್ತದೆ.

## ಮಧ್ಯಪ್ರಾಂತ

ಜಬಲಪುರ ಮುಸಲ್ಮಾನ ಮತದಾರ ಸಂಘದ ಪರವಾಗಿ ಚುನಾವಣೆಗೆ ನಿಂತ ಇಬ್ಬರು ಮುಸಲ್ಮಾನ ಹುರಿಯಾಳುಗಳಲ್ಲಿ ೭ ನೇ ತಾರೀಕು ಬಡಿದಾಟವಾಯಿತು. ೨೦ ಕ್ಕಿಂತಲೂ ಹೆಚ್ಚು ಜನರಿಗೆ ಗಾಯಗಳಾಗಿವೆ. ಮೂವರು ಪೋಲೀಸರಿಗೂ ಪೆಟ್ಟು ಬಿದ್ದಿವೆ. ಈ ಸಂಬಂಧದಲ್ಲಿ ಹದಿನಾಲ್ಕು ಜನರನ್ನು ಬಂಧಿಸಲಾಗಿದೆ.

ಅಗಷ್ಟ ಚಳವಳಿಯ ಸಂಬಂಧದಲ್ಲಿ ಶಿಕ್ಷೆಯನ್ನನುಭವಿಸುತ್ತಿದ್ದ ೧೦ ರಾಜಕೀಯ ಕೈದಿಗಳನ್ನು ಬಿಡುಗಡೆ ಮಾಡಲಾಯಿತು.

ಜಬಲಪುರದಲ್ಲಿ ಇತ್ತೀಚೆ ನಡೆದ ಪೋಲೀಸ ಸಂಪಿನ ಸಂಬಂಧದಲ್ಲಿ ೭೦ ಜನರು ಬಂಧಿಸಲ್ಪಟ್ಟರುವರಷ್ಟೆ. ಇವರಲ್ಲಿ ನಾಲ್ವರ ಮೇಲೆ ಮಿಲಿಟರಿ ಅಧಿಕಾರಿಗಳು ಖಟ್ಲೆ ಹಾಕಿರುವರು.

## ಹೊಸದಿಲ್ಲಿ

ಪಾಕಿಸ್ತಾನ, ಶೀಖಿಸ್ತಾನಗಳೆಂದು ಕೂಗುವವರು ಬ್ರಿಟಿಶರ ಕೈಗೊಂಬೆಗಳೆಂದು ಸರದಾರ ಶಾರ್ದೂಲಸಿಂಗ ಕವೀಶ್ವರರು ದಿಲ್ಲಿ ಗಾಂಧಿ ಮೈದಾನದಲ್ಲಿ ಮಾತಾಡುತ್ತ ನುಡಿದರು.

ರೇವಾ ಸಂಸ್ಥಾನದ ಹೊಸ ಅರಸರಾದ ಮಹಾರಾಜ ಮಾರ್ತಾಂಡಸಿಂಹಜೀಯವರು ೭ನೇ ತಾರೀಕು ದರಬಾರ ನಡೆಸಿದಾಗ ಸಂಸ್ಥಾನದಲ್ಲಿ ಜನಪ್ರಭು ಸರಕಾರ ಸ್ಥಾಪಿಸುವ ತಮ್ಮ ಇಚ್ಛೆಯನ್ನು ವ್ಯಕ್ತಪಡಿಸಿದರು.

೧೯೪೧-೪೨ ರ ವರೆಗೆ ಬಾಕಿ ಉಳಿದ ಭೂಕಂದಾಯವನ್ನು ಸೂಟು ಬಿಡುವುದಾಗಿಯೂ ಹೇಳಿದರು.

ಆಹಾರ ಸಮಸ್ಯೆಯ ತಜ್ಞರೆಂದು ತಿಳಿಯಲಾಗುತ್ತಿರುವ ಹರ್ಬರ್ಟ ಹೂವರರು ಲಾರ್ಡ ವೇವೆಲ್ಲರ ಆಮಂತ್ರಣದ ಮೇರೆಗೆ ಹಿಂದುಸ್ತಾನಕ್ಕೆ ಬಂದಿರುವರು. ಇಲ್ಲಿನ ಆಹಾರ ಪರಿಸ್ಥಿತಿಯನ್ನು ತಿಳಿದುಕೊಳ್ಳುವುದೆ ಇದರ ಉದ್ದೇಶ. ಅವರು ಈಗ ಇದೇ ಉದ್ದೇಶಕ್ಕಾಗಿ ಯುರೋಪಿನಲ್ಲಿ ಸಂಚರಿಸುತ್ತಿರುವರು. ಐದು ತಿಂಗಳ ಹಿಂದೆಯೆ ಆಹಾರ ಸಮಸ್ಯೆಯನ್ನು ಕೈಯಲ್ಲಿ ತೆಗೆದುಕೊಂಡಿದ್ದರೆ ಹೆಚ್ಚು ಒಳಿತಾಗುತ್ತಿದೆಂದು ಅವರ ಅಭಿಪ್ರಾಯ.

ಗ್ವಾಲ್ಹೇರದಲ್ಲಿ ೯ನೇ ತಾರೀಕು ಜಾತೀಯ ತಿಕ್ಕಾಟ ಸಂಭವಿಸಿ ನಡೆದ ಗಲಭೆಯಲ್ಲಿ ೭ ಜನ ಸತ್ತಿದ್ದು ೩೨ ಜನರಿಗೆ ಗಾಯಗಳಾಗಿವೆ. ನಗರದಲ್ಲಿ ೧೪ನೇ ಕಲಮು ಜಾರಿ ಮಾಡಿ ೫ಕ್ಕಿಂತ ಹೆಚ್ಚು ಜನರು ಗುಂಪಾಗಿ ತಿರುಗಾಡಬಾರದೆಂದು ವಿಧಿಸಲಾಗಿದೆ. ಕರ್ಫ್ಯೂ ಆಜ್ಞೆಯನ್ನೂ ಹೊರಡಿಸಲಾಗಿದೆ.

ಸದ್ಯಕ್ಕೆ ಹಣ ಇಡುವುದಕ್ಕಾಗಿ ಬಹಳ ಬೇಡಿಕೆ ಬಂದದ್ದರಿಂದ ಹಿಂದುಸ್ತಾನ ಸರಕಾರದವರು ನೂರಕ್ಕೆ ೨|| ಬಡ್ಡಿ ದರದ ೧೯೬೦ ನೇ ಇಸ್ವಿಯ ಮುತ್ತೆ ೨೦ ಕೋಟಿ ರೂಪಾಯಿಗಳ ಸಾಲಪತ್ರಗಳನ್ನು ಮಾರಾಟಕ್ಕೆ ತೆಗೆಯುವವರಿದ್ದಾರೆ. ರಿಜರ್ವ ಬ್ಯಾಂಕಿನ ಪರವಾಗಿ ಈ ಸಾಲಪತ್ರಗಳ ಮಾರಾಟ ನಡೆಯುವದು.

ನಾಲ್ಕನೆ ಹಿಂದೀ ಕೋಸ್ಟಲ್ ಬ್ಯಾಟರಿಯಲ್ಲಿಯ ೯ ಸೈನಿಕರು ೧೯೪೩ ರಲ್ಲಿ ಸೈನಿಕ ಕೋರ್ಟಿನವರು ಬಂಡಿನ ಆರೋಪದಿಂದ ದೇಹಾಂತ ಶಾಸನ ವಿಧಿಸಿ ಅವರನ್ನು ಗಲ್ಲಿಗೇರಿಸಿದರೆಂದು ಯುದ್ಧ ಖಾತೆಯ ಕಾರ್ಯದರ್ಶಿಗಳು ಕೇಂದ್ರ ಶಾಸನ ಸಭೆಯಲ್ಲಿ ಉತ್ತರಿಸಿದರು.

ಸೈನ್ಯದ ವಶದಲ್ಲಿದ್ದ ಭೂಮಿಗಳಲ್ಲಿ ಹಿಂದೀ ಸೈನಿಕರಿಂದ ಬೆಳೆ ಬೆಳೆಯಿಸಬೇಕು ಎಂಬರ್ಥದ ಸೂಚನೆಯನ್ನು ಮೀರಾಬೇನರು ಸರ್ ಸೇನಾಪತಿಯನ್ನು ಕಂಡು ಹೇಳಿದರು.

---

ಬೆಳಗಲಿಯಲ್ಲಿ ಯುಗಾದಿಯ ಶುಭ ಮುಹೂರ್ತದಲ್ಲಿ ಪ್ರಜಾ ಸಂಘದ ಒಂದು ಶಾಖೆಯನ್ನು ಸ್ಥಾಪಿಸಲಾಗಿದೆ. ಸೇವಾದಲದ ಶಾಖೆಯೂ ಸ್ಥಾಪಿಸಲ್ಪಟ್ಟದೆ. ಶ್ರೀ ತಿ ಮುಶಾನಿಯವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಶ್ರೀ ಟಂಕಸಾಳಿ ವಕೀಲ, ಬೆಳಗಲಿ ವಕೀಲ, ಶ್ರೀ ಕಾಳೆ ಮೊದಲಾದವರು ಭಾಷಣ ಮಾಡಿದರು.

## ಸಂಯುಕ್ತಪ್ರಾಂತ

೧೯೪೨ ರ ಚಳವಳಿಯಲ್ಲಿ ಶಿಕ್ಷೆ ಅನುಭವಿಸುತ್ತಿದ್ದ ೨ನೇಕ ರಾಜಕೀಯ ಕೈದಿಗಳನ್ನು ಸಂಯುಕ್ತ ಪ್ರಾಂತದ ಕಾಂಗ್ರೆಸ ಸರಕಾರ ಬಿಡುಗಡೆ ಮಾಡಿದೆ

ಕಾನಪುರದ ಜೆ. ಕೆ. ನಾರಿನ ಗಿರಣಿಯ ಸುಮಾರು ೪೫೦೦ ಕೆಲಸಗಾರರು ರೂಪಾಯಿಗೆ ನಾಲ್ಕಾಣೆ ಬೋನಸ್ ಬೇಡಿ ೮ನೇ ತಾರೀಕಿನಿಂದ ಸಂಪು ಹೂಡಿದ್ದಾರೆ. ಗಿರಣಿಯವರು ರೂಪಾಯಿಗೆ ಮೂರಾಣೆ ಬೋನಸ ಕೊಡಲೊಪ್ಪಿದ್ದಾರೆ.

ಶ್ರೀ ಜೋಗೇಶಚಂದ್ರ ಚಟರ್ಜಿಯವರ ಬಿಡುಗಡೆ ಮಾಡಿಲಾಗಿದೆ. ಇವರು ತಮ್ಮ ಜೀವನದ ಬಹುಭಾಗವನ್ನು ಸೆರೆಮನೆಯಲ್ಲಿ ಕಳೆದಿರುವರು. ೧೯೪೨ ರ ಅಗಷ್ಟದಲ್ಲಿ ಇವರನ್ನು ಬಂಧಿಸಲಾಗಿತ್ತು ಎರಡು ತಿಂಗಳ ಹಿಂದೆ ಇವರು ಅನ್ನಸತ್ಯಾಗ್ರಹ ಹೂಡಿದ್ದರು.

ಲಖನೌದ ಪ್ರಮುಖ ಕಾಂಗ್ರೆಸ್ಸಿಗರೂ ೪೨ನೇ ಇಸ್ವಿಯಿಂದ ಕಾಣೆಯಾಗಿದ್ದವರೂ ಆದ ಪಂಡಿತ ಶಿವರಾಮ ದ್ವಿವೇದಿಯವರ ಮೇಲಿನ ವಾರಂಟನ್ನು ಸರಕಾರದವರು ಹಿಂತೆಗೆದುಕೊಂಡದ್ದರಿಂದ ಅವರು ೬ನೇ ತಾರೀಕಿನ ದಿನ ಬಂಗಾಲ ಪ್ರಾಂತಿಕ ಕಾಂಗ್ರೆಸಕಮೀಟಿಯಲ್ಲಿ ಉಪಸ್ಥಿತರಾದರು. ಇವರಿಗೆ ಕಾಂಗ್ರೆಸ್ಸಿಗರು ಹಾರ್ದಿಕ ಸ್ವಾಗತವಿತ್ತರು ಇವರನ್ನು ಹಿಡಿಯುವದಕ್ಕಾಗಿ ೩೦೦೦ ರೂಪಾಯಿ ಪಾರಿತೋಷಕವಿಡಲಾಗಿತ್ತು.

## ಬಿಹಾರ---ಓಡಿಸಾ

ಚುನಾವಣೆಯ ಮುನ್ನ ರಾಂಚಿ ಜಿಲ್ಹೆಯಲ್ಲಿ ಕಾಂಗ್ರೆಸಿಗರು ೧೦೦ ಆದಿವಾಸಿಗಳ ಕೊಲೆ ಮಾಡಿದರೆಂದು ಬಂಗಾಲ ಮುಸ್ಲಿಂಲೀಗ ಪಕ್ಷದ ಧುರೀಣರಾದ ಸುಹ್ರವರ್ದಿಯವರು ಮಾಡಿದ ಆರೋಪವನ್ನು ಬಿಹಾರ ಸರಕಾರದವರು ಅಲ್ಲಗಳೆದಿದ್ದಾರೆ. ಮಾರ್ಚ ೨೯ ರ ರಾತ್ರಿ ಚುನಾವಣಿ ನಡೆದಾಗ ಕೆಲ ಆದಿವಾಸಿಗಳು ಅಲ್ಲಿಗೆ ಬಂದು ಗೊಂದಲ ಹಾಕಿದರು. ಕೋಟೆಯ ಹತ್ತರ ೫ ಆದಿವಾಸಿಗಳ ಹೆಣ ಸಿಕ್ಕಿವೆ. ೨೫ ಜನರಿಗೆ ಗಾಯಗಳಾಗಿವೆ. ಈ ೫ ಜನರು ಹೇಗೆ ಸತ್ತರೆಂಬ ವಿಚಾರಣೆ ನಡೆದಿದೆ.

## ಸರಹದ್ದ

ಧಾನ್ಯ ನಿಯಂತ್ರಣ ಮತ್ತು ಹಂಚಿಕೆ ಮೊದಲಿಗಿಂತ ಹೆಚ್ಚು ಸುವ್ಯಸ್ಥಿತವಾಗಿ ನಡೆಯಬೇಕೆಂದು ಸರಹದ್ದ ಸರಕಾರದವರು ದೊಡ್ಡ ದೊಡ್ಡ ಜಮೀನದಾರರಿಂದ ಒತ್ತಾಯದಿಂದ ಧಾನ್ಯ ವಸೂಲ ಮಾಡಲಿರುವರು. ಲಾಭಬಡಕತನ ಮತ್ತು ಸಂಗ್ರಹಪ್ರವೃತ್ತಿಯನ್ನು ಅಳಿದುಬಿಡಲಾಗುವದು.

## ಬಂಗಾಲ---ಆಸಾಮ

ಕಲಕತ್ತೆಯಲ್ಲಿ ಮೋಟರ ಬಸ್ಸೊಂದು ಒಂದು ಚಿಕ್ಕ ಹುಡುಗನ ಮೇಲೆ ಹಾಯ್ದಿದ್ದರಿಂದ ಅವನು ಮರಣಹೊಂದಿದನು. ಕೂಡಲೆ ಅನೇಕ ಜನರು ಅಲ್ಲಿ ನೆರೆದು ಒಳಗಿದ್ದ ಪ್ರವಾಸಿಕರಿಗೊಬ್ಬರು ಕೆಳಗಿಳಿಯ ಹೇಳಿ ಆ ಮೋಟರಿಗೆ ಬೆಂಕಿ ಹಚ್ಚಿದರು. ಅಗ್ನಿಶಾಮಕ ಯಂತ್ರ ಬರುವ ಮೊದಲು ಅದು ಸುಟ್ಟುಹೋಯಿತು. ಇಂಥ ಅಪರಾಧ ಮಾಡಿದ್ದಕ್ಕಾಗಿ ಮಿಲಿಟರಿ ಮೋಟರಗಳನ್ನು ಈ ಮೊದಲು ಸುಟ್ಟದ್ದುಂಟು ಆದರೆ ಪ್ರವಾಸಿಕರ ಮೋಟರನ್ನು ಇಂತು ಸುಟ್ಟದ್ದು ಇದೇ ಮೊದಲು.

ಸುಭಾಸಚಂದ್ರ ಬೋಸರೊಂದಿಗೆ ಜರ್ಮನಿಯಿಂದ ಜಪಾನಕ್ಕೆ ಪ್ರಯಾಣ ಮಾಡಿದ್ದ ಕರ್ನಲ್ ಎ. ಹಸನ ಮತ್ತು ಮೇಜರ ಸ್ವಾಮಿ ಅವರು ಬೇಗನೆ ಕಲಕತ್ತೆಗೆ ಬರಲಿರುವರೆಂದು ತಿಳಿಯುತ್ತದೆ.

ಬಂಗಾಲ ನಾಗಪುರ ರೇಲ್ವೆ ಕೆಲಸಗಾರರು ತಾ. ೨೨ಕ್ಕೆ ಮುಷ್ಕರ ಬ್ಯಾಲೆಟ್ಟನ್ನು ಹಾಕಲು ನಿರ್ಧರಿಸಿದ್ದಾರೆ.

ಬಂಕುರಾ ಜಿಲ್ಹೆಯಲ್ಲಿ ಬಟ್ಟೆಯ ಕೊರತೆ ವಿಶೇಷವಾಗಿದೆಂದು ಮಾರವಾಡಿ ಪರಿಹಾರ ಸಂಸ್ಥೆಯವರು ಪ್ರಕಟಿಸುತ್ತಾರೆ. ಕೆಲ ಹಳ್ಳಿಗಳಲ್ಲಿ ಒಂದೊಂದು ಕುಟುಂಬದಲ್ಲಿ ಇಬ್ಬರು ಮೂವರಿಗೆ ಕೂಡಿಯೆ ಹೊದೆಯಲು ಒಂದು ಚಿಂದಿಯಿದೆ ಹರೆಯದ ಹುಡುಗ ಹುಡಿಗೆಯರಿಗೆ ತೊಡಲು ಬಟ್ಟೆಯಿಲ್ಲ. ಅವರನ್ನು ನೋಡಿದವರಿಗೆ ನಾಚಿಕೆಯಾಗದಿರದು.

ಅಗಷ್ಟ ಗಲಭೆಯ ಕಾಲಕ್ಕೆ ಅತ್ಯಾಚಾರ ಮಾಡಿದ ಸರಕಾರಿ ಅಧಿಕಾರಿಗಳ ಮೇಲೆ ಕ್ರಮ ತೆಗೆದುಕೊಳ್ಳಲು ಕಾಂಗ್ರೆಸ ಮಂತ್ರಿಮಂಡಳವು ಯಾವ ಧೋರಣ ವಹಿಸತಕ್ಕದ್ದೆಂಬ ಬಗ್ಗೆ ಕಾಂಗ್ರೆಸ ಅಧ್ಯಕ್ಷರಿಗೆ ಆಸಾಮದ ಮುಖ್ಯ ಮಂತ್ರಿ ಬಾರ್ಡೋಲಾಯ ಇವರು ಸಲಹೆ ಕೇಳಿರುವರು.

ಕೇಂದ್ರ ಮತ್ತು ಪ್ರಾಂತಿಕ ಚುನಾವಣೆಗಳಲ್ಲಿ ಅಧಿಕಾರಿಗಳ ಹಸ್ತಕ್ಷೇಪದ ಬಗ್ಗೆ ವಿಚಾರಣೆ ನಡೆಸುವದು ವಾಯಿಸರಾಯರ ಮತ್ತು ಪ್ರಾಂತಿಕ ಗವರ್ನರರ ಕರ್ತವ್ಯವಾಗಿದೆಂದು ಬಂಗಾಲದ ಹಿಂದಿನ ಮುಖ್ಯ ಮಂತ್ರಿಗಳಾದ ಫಜಲುಲ್ ಹಕ್ಕರು ಒಂದು ಪ್ರಕಟನೆಯಲ್ಲಿ ಹೇಳಿರುವರು. ಸುಹ್ರವರ್ದಿಯವರು ಈ ಸಂಬಂಧದಲ್ಲಿ ಹೊರಡಿಸಿದ ಪ್ರಕಟನೆ ಸುಳ್ಳು ಸಂಗತಿಗಳಿಂದ ತುಂಬಿದೆಂದೂ ಹಕ್ಕರು ಹೇಳಿರುವರು.

ಕಲಕತ್ತೆಯಲ್ಲಿ ಮಾರ್ಚ ೩೦ಕ್ಕೆ ಮುಗಿದ ವಾರದಲ್ಲಿ ಬೀದಿಗಳಲ್ಲಿ ದೊರೆತ ೨೩ ಹೆಣಗಳಲ್ಲಿ ೫ ಜನ ಉಪವಾಸದಿಂದ ಸತ್ತಿರುವರೆಂದು ಪ್ರಸಿದ್ಧವಾಗಿದೆ. ಆದರೆ ವಿಚಾರಣೆಯ ನಂತರ ಇಬ್ಬರೆ ಉಪವಾಸ ಮಾರಿಗೆ ಬಲಿಯಾಗಿರುವರೆಂದು ಪ್ರಕಟಿಸಲಾಗಿದೆ. ಹೊರಗಿನಿಂದ ಕಲಕತ್ತೆಗೆ ಬಂದವರು ಇಂಥ ದುಃಸ್ಥಿತಿಗೀಡಾಗುತ್ತಿದ್ದುದು ಕಂಡು ಬಂದಿದೆ. ಆಯಾ ಜಿಲ್ಹೆಗಳಲ್ಲಿಯೆ ಈಗ ನಿರಾಶ್ರಿತರಿಗೆ ಸಹಾಯ ಒದಗಿಸಲ್ಪಡುತ್ತದೆ.

# ನಾನು ನಜೀಮುದ್ದೀನನಲ್ಲ, ಕಾಂಗ್ರೆಸ್ಸಿಗ

## ಬಿಹಾರದ ಗವ್ಹರ್ನರರಿಗೆ ಶ್ರೀ ಕೃಷ್ಣಸಿಂಹರ ಮಾರುತ್ತರ

೧೯೪೨ ರ ಚಳವಳಿಯ ಸಂಬಂಧವಾಗಿ ಹತ್ತು ವರುಷಗಳ ಶಿಕ್ಷೆಯನ್ನನುಭವಿಸುತ್ತಿದ್ದ ಬಿಹಾರದ ಹಿಂದಿನ ಕಾಂಗ್ರೆಸ ಮಂತ್ರಿ ಶ್ರೀ ಜುಗುಲ್ ಚೌಧರಿಯವರನ್ನು ಬಿಡುಗಡೆ ಮಾಡಬೇಕೆಂದು ಪ್ರಧಾನ ಮಂತ್ರಿ ಶ್ರೀ ಕೃಷ್ಣ ಸಿಂಹರವರು ಸೂಚಿಸಿದುದಕ್ಕೆ ಗವ್ಹರ್ನರರಾದ ರುಥರಫೋರ್ಡರರು ಆಕ್ಷೇಪಿಸಲು "ನಾನು ನಜೀಮುದ್ದೀನನಲ್ಲ. ನಾನು ಕಾಂಗ್ರೆಸ್ಸಿಗ" ಎಂದು ಅವರು ಮಾರುತ್ತರ ಕೊಟ್ಟರು.

ಚೌಧರಿಯವರ ಬಿಡುಗಡೆಯು ಗವ್ಹರ್ನರರ ಹೊಣೆಯೆಂದು ರುಥರಫೋರ್ಡರವರು ಹೇಳಿ ಬಂಧಮುಕ್ತಗೊಳಿಸಲು ನಿರಾಕರಿಸಿದರು. ಗವ್ಹರ್ನರರ ಬಿಡುಗಡೆ ಮಾಡದೆ ಇದ್ದರೆ, ಪ್ರಧಾನ ಮಂತ್ರಿಗಳಾದ ತಾವು ಅವರನ್ನು ಬಂಧಮುಕ್ತಗೊಳಿಸಿ, ಮಂತ್ರಿಗಳನ್ನಾಗಿ ಮಾಡುವೆನೆಂದು ಶ್ರೀ ಕೃಷ್ಣಸಿಂಹರವರು ಹೇಳಿ ಅದಕ್ಕೆ ಆಸ್ಪದ ಕೊಡದೆ, ಗವ್ಹರ್ನರರೇ ಬಿಡುಗಡೆ ಮಾಡುವುದು ಭೂಷಣವೆಂದು ನುಡಿದರು

ಬಂಗಾಲದಲ್ಲಿ ಸರ್ ನಜೀಮುದ್ದೀನರು ತಮ್ಮ ಈ ವೈಯಕ್ತಿಕ ಹೊಣೆಯನ್ನು ಪ್ರಶ್ನಿಸಿಲ್ಲವೆಂದು ರೂಥರ ಫೋರ್ಡರವರು ತಿಳಿಸಲು "ನಾನು ನಜಿಮುದ್ದೀನನಲ್ಲ ನಾನು ಕಾಂಗ್ರೆಸ್ಸಿಗ"ನೆಂದು ಶ್ರೀ ಸಿಂಹರವರು ಪ್ರತ್ಯುತ್ತರ ಕೊಟ್ಟರು. ರೂಥರಫೋರ್ಡರವರು ಮದ್ರಾಸಿನ ಶ್ರೀ ರಾಜಾಜಿಯವರ ಉದಾಹರಣೆ ಕೊಡಲು ಆರಂಭಿಸಿದರು. ಆದರೆ ಅವರು ವಾಕ್ಯವನ್ನು ಮುಗಿಸುವ ಮೊದಲೇ "ಪ್ರಾಯಶಃ ರಾಜಾಜಿಯವರು ಸ್ವಲ್ಪ ಸೌಮ್ಯಮನುಷ್ಯರಿರಬಹುದು" ಎಂದು ನಗುತ್ತ ಶ್ರೀ ಕೃಷ್ಣ ಸಿಂಹರು ನುಡಿದರು. "ನನ್ನ ಆತ್ಮಸಾಕ್ಷಿಯ ವಿರುದ್ಧ ಅವರನ್ನು ಹೇಗೆ ಬಿಡುಗಡೆ ಮಾಡಲಿ?" ಎಂದು ಗವ್ಹರ್ನರರು ಹೇಳಿದರು.

ಮರುದಿನ ಶ್ರೀ ಕೃಷ್ಣ ಸಿಂಹರವರು ಶ್ರೀ ಜುಗಲ್ ಚೌಧರಿಯವರನ್ನು ಸರಕಾರೀ ಕಚೇರಿಗೆ ಕರೆದುಕೊಂಡು ಬಂದು ಮಂತ್ರಿಗಳನ್ನಾಗಿ ಅವರನ್ನು ಆರಿಸಿರುವೆನೆಂದು ಗವ್ಹರ್ನರರಿಗೆ ತಿಳಿಸಿದರು.

## ಬೆಂಗಳೂರಲ್ಲಿ ವೈಮಾನಿಕ ತಜ್ಞರ ಶಿಷ್ಟ ಮಂಡಳ

ಮೈಸೂರ ಸಂಸ್ಥಾನದಲ್ಲಿರುವ ವಿಮಾನ ಕಾರಖಾನೆಯ ಮತ್ತು ಹಿಂದುಸ್ತಾನದಲ್ಲಿ ಉಳಿದ ಕಡೆಗಳಲ್ಲಿರುವ ಕಾರಖಾನೆಗಳ ಭವಿಷ್ಯವನ್ನು ನಿರ್ಧರಿಸಿ ಸೂಕ್ತವಾದ ಸಲಹೆ ಕೊಡಲು ಹಿಂದುಸ್ತಾನಕ್ಕೆ ಬಂದಿರುವ ವೈಮಾನಿಕ ತಜ್ಞರ ಶಿಷ್ಟಮಂಡಳವು ಬೆಂಗಳೂರಿಗೆ ಬಂದು ವಿಮಾನ ಕಾರಖಾನೆಯನ್ನು ನೋಡಿ ತಮ್ಮ ಸಂತೋಷ ಪ್ರದರ್ಶಿಸಿದರು. ೧೦ ನೇ ತಾರೀಕಿನ ದಿನ ಅವರು ಬೆಂಗಳೂರಿನಿಂದ ಮರಳುವಾಗ ಶಿಷ್ಟ ಮಂಡಳದ ಧುರೀಣರಾದ ಜೆ ವಿ. ಕನೋಲಿಯವರು ಒಂದು ಹೇಳಿಕೆಯನ್ನು ಕೊಟ್ಟರು. ಅದರ ಆಶಯವಿಂತಿದೆ.

ವಿಮಾನ ಕಾರಖಾನೆಯ ವಿಷಯವಾಗಿ ಈಗ ಸಾರ್ವಜನಿಕವಾಗಿ ಹೇಳಿಕೆ ಕೊಡುವದು ಸಮಂಜಸವಲ್ಲವೆಂದು ತಿಳಿಯುತ್ತೇವೆ ದಿವಾನರೊಡನೆ ಮತ್ತು ಸಂಸ್ಥಾನದ ಇತರ ಉಚ್ಚ ಅಧಿಕಾರಿಗಳೊಡನೆ ಚರ್ಚೆ ನಡೆಸಿದಾಗಲೂ ಇದೇ ನೀತಿ ಅನುಸರಿಸುತ್ತ ಬಂದಿದ್ದೇವೆ ಸಾಮಾನ್ಯತತ್ವಗಳ ಆಧಾರದ ಮೇಲೆ ಚರ್ಚೆ ನಡೆಸಿದ್ದೇವೆ. ಪ್ರಗತಿಪರವಾದ ಮೈಸೂರು ಸಂಸ್ಥಾನದಲ್ಲಿಯ ಆಧುನಿಕ ಇಂಜಿನಿಯರಿಂಗ ಸೌಕರ್ಯಗಳನ್ನು ಮತ್ತು ಆ ಶಿಕ್ಷಣದ ಸೌಕರ್ಯಗಳನ್ನು ನೋಡಿ ತುಂಬಾ ಸಂತುಷ್ಟರಾಗಿದ್ದೇವೆ. ಸ್ವಾವಲಂಬಿಯಾದ ಅತ್ಯಾಧುನಿಕ ಸೌಕರ್ಯಗಳಿಂದ ಕೂಡಿದ ವಿಮಾನ ಕಾರಖಾನೆ ಮೈಸೂರಲ್ಲಿರುವದಾದರೆ ಅದರ ವಿಚಾರದಲ್ಲಿ ಹೆಮ್ಮೆಪಡುವದೂ ಉತ್ಸಾಹದಿಂದ ಕೂಡಿರುವದೂ ಸ್ವಾಭಾವಿಕವಾದುದು. ಸಹಾಯ ಸಹಕಾರ ನೀಡಿದವರಿಗೆಲ್ಲ ವಂದನೆಗಳು.

# ಕಲಕತ್ತೆಯಲ್ಲಿಯ ಆಹಾರ ಪರಿಸ್ಥಿತಿ

## ನಿರಾಶ್ರಿತರ ಸಂಖ್ಯೆ ಹೆಚ್ಚುತ್ತಿದೆ

### ಕೇಂದ್ರ ಶಾಸನ ಸಭೆಯಲ್ಲಿ ಚರ್ಚೆ

ಕೇಂದ್ರ ಶಾಸನ ಸಭೆಯಲ್ಲಿ ೮ ನೇ ತಾರೀಕು ಶ್ರೀ ಸನ್ಯಾಲರು ನಿಲುವಳಿ ಸೂಚನೆಯನ್ನು ಮಂಡಿಸಿ ಕಲಕತ್ತೆಯಲ್ಲಿ ಉಪವಾಸದಿಂದ ಜನರು ಸತ್ತದ್ದನ್ನು ಚರ್ಚಿಸಲು ಕೇಳಿಕೊಂಡರು. ಈ ವಿಷಯ ಅತ್ಯಂತ ಮಹತ್ವದ್ದಿರುವದರಿಂದ ಹಿಂದುಸ್ತಾನ ಸರಕಾರದವರು ಈ ತರದ ಮರಣಗಳನ್ನು ತಪ್ಪಿಸಲು ಏನು ಮಾಡಿರುವರು. ಹಾಗೂ ಮಾಡುತ್ತಿರುವರು ಎಂಬುದು ಸದಸ್ಯರಿಗೆ ಬೇಕಾಗಿದೆಂದು ನುಡಿದರು. ಆಹಾರ ಖಾತೆಯ ಕಾರ್ಯದರ್ಶಿಗಳು ಮಾತಾಡುತ್ತ ನಿರಾಶ್ರಿತರ ಸಂಖ್ಯೆ ಕಲಕತ್ತೆಯಲ್ಲಿ ಹೆಚ್ಚುತ್ತಿರುವದು ನಿಜವೆಂದು ಒಪ್ಪಿಕೊಂಡರು. ಪ್ರಶ್ನೆಯು ಮುಖ್ಯವಾಗಿ ಪ್ರಾಂತಿಕ ಪ್ರಶ್ನೆಯಿರುವದು ಪ್ರಾಂತಗಳಲ್ಲಿ ಸಾಕಷ್ಟು ಆಹಾರವಿದೆಂದು ನೋಡುವದು ಹಿಂದುಸ್ತಾನ ಸರಕಾರದ ಕರ್ತವ್ಯವಿದ್ದು ಕಲಕತ್ತಾ ಹಾಗು ಅದರ ಸುತ್ತಮುತ್ತಲಿನ ಜಿಲ್ಹೆಗಳಲ್ಲಿ ಸದ್ಯಕ್ಕೆ ಹೇರಳವಾದ ಆಹಾರಧಾನ್ಯವಿದೆಂದೂ ಕಲಕತ್ತೆಯಲ್ಲಿ ನಿರಾಶ್ರಿತರ ಉಪಚಾರಕ್ಕಾಗಿ ಅನೇಕ ಆಸ್ಪತ್ರೆಗಳಿರುವವೆಂದು ಹಿಂದುಸ್ತಾನ ಸರಕಾರಕ್ಕೆ ಮನವರಿಕೆಯಾಗಿದೆ. ಆದುದರಿಂದ ನಿಲುವಳಿ ಸೂಚನೆಯು ಪ್ರಯೋಜನವೇನೂ ಆಗದೆಂದು ಹೇಳಿದರು.

ಹಿಂದುಸ್ತಾನದಲ್ಲಿ ಎಲ್ಲಿಯೆ ಜನರು ಉಪವಾಸದಿಂದ ಸತ್ತರೂ ಅದರ ಹೊಣೆ ಹಿಂದುಸ್ತಾನ ಸರಕಾರದ್ದೆ ಇರುವದೆಂದು ಪ್ರೊ. ರಂಗಾ ಇವರು ನುಡಿದರು.

ಮುಸ್ಲಿಂ ಲೀಗಿನ ಸರ್ ಝಿಯಾವುದ್ದೀನರು ಅಹಮ್ಮದರು ಬಂಗಾಲದಲ್ಲಿಯೆ ಏಕೆ ಜನರು ಉಪವಾಸದಿಂದ ಸಾಯುವರೋ ತಿಳಿಯದೆಂದು ಆಶ್ಚರ್ಯವ್ಯಕ್ತ ಮಾಡಿ ಉಳಿದ ಕಡೆಗಳಲ್ಲಿ ಆಹಾರವಿಲ್ಲದೆ ಜನರು ಪೇಟೆಗಳನ್ನು ಲೂಟಿ ಮಾಡಿ ಜೇಲಿಗೆ ಹೋಗುತ್ತಿರಬೇಕೆಂದು ಹೇಳಿದರು. ಕಾಂಗ್ರೆಸ್ ಪಕ್ಷದ ಧುರೀಣರಾದ ಶರಚ್ಚಂದ್ರ ಬೋಸರು ಮಾತಾಡುತ್ತ ೧೯೪೩ ರಲ್ಲಿ ಜನ ಇದೇ ರೀತಿ ಕಲಕತ್ತೆಗೆ ಬಂದು ಉಪವಾಸದಿಂದ ಮರಣ ಹೊಂದಿದ್ದನ್ನು ಮರೆಯುವದಿಲ್ಲೆಂದು ಮುಂತಾಗಿ ಹೇಳಿದರು.

ಇಂಡೋನೇಶಿಯದವರು ೫ ಲಕ್ಷ ಟನ್ ಆಹಾರ ಕೊಡುವದಾಗಿ ತಿಳಿಸಿದ್ದಾರಂತೆ. ಸರಕಾರದವರು ಒಣ ಪ್ರತಿಷ್ಠೆಗೆ ಬಲಿಬೀಳದೆ ಅದನ್ನು ಸ್ವೀಕರಿಸಬೇಕೆಂದು ಸನ್ಯಾಲರು ಹೇಳಿದರು ಗೋವಿಂದ ಮಾಲವೀಯ ಮತ್ತು ವೆಂಕಟಸುಬ್ಬರೆಡ್ಡಿಯವರು ಮಾತಾಡುತ್ತ ಅನ್ನಛತ್ರಗಳನ್ನು ಪ್ರಾರಂಭಿಸಬೇಕು ಮತ್ತು ರೈತರಿಗೆ ದ್ರವ್ಯಸಹಾಯ ಮಾಡಿ ಆಹಾರ ಧಾನ್ಯಗಳ ಬೆಲೆ ಇಳಿಯುವಂತೆ ಮಾಡಬೇಕೆಂದರು.

ಲೀಗದ ಸಿದ್ದೀಕಿಯವರು ಮಾತಾಡಿ ಇಬ್ಬರು ಮುದುಕಿಯರು ಸತ್ತದ್ದನ್ನು, ಅವರು ಸಹ ಆಸ್ಪತ್ರೆಗಳಲ್ಲಿ ಸತ್ತಿರಬಹುದು, ಕಾಂಗ್ರೆಸ್ಸಿನವರು ತಮ್ಮ ಬೇಳೆ ಬೆಯಿಸಿಕೊಳ್ಳಲು ಇದನ್ನು ಉಪಯೋಗಿಸುತ್ತಾರೆ. ಬಂಗಾಲದ ಪರಿಸ್ಥಿತಿ ದಕ್ಷಿಣ ಭಾಗದಲ್ಲಿಯ ಸ್ಪಷ್ಟೀಕರಣವಾಗಿಲ್ಲ. ಬಂಗಾಲವನ್ನು ಅದರ ಪಾಲಿಗೆ ಬಿಟ್ಟುಕೊಡಿರೆಂದು ಹೇಳಿದರು.

೯ ನೇ ತಾರೀಕಿನ ದಿವಸ ಚರ್ಚೆ ಮುಂದೆ ಸಾಗಿ ಸರಕಾರದ ಪರ ಆಶ್ವಾಸನ ದೊರೆತದ್ದರಿಂದ ಸನ್ಯಾಲರು ನಿಲುವಳಿ ಸೂಚನೆಯನ್ನು ಹಿಂತೆಗೆದುಕೊಂಡರು. ಈ ಚರ್ಚೆ ನಡೆದಾಗ ಆಹಾರ ಮಂತ್ರಿಗಳಾದ ಶ್ರೀವಾಸ್ತವರು ಪ್ರಾಂತಿಕ ಮುಖ್ಯ ಮಂತ್ರಿಗಳ ಪರಿಷತ್ತನ್ನು ಕರೆಯುವದಾಗಿ ಹೇಳಿದರು.

## ರಾಯರ ಪಕ್ಷಕ್ಕೆ ಕೊಡುತ್ತಿದ್ದ ೧೩೦೦೦ ರೂಪಾಯಿ

೮ ನೇ ತಾರೀಕಿನ ದಿವಸ ನಡೆದ ಚರ್ಚೆಯಲ್ಲಿ ಆಹಾರ ಖಾತೆಯ ಕಾರ್ಯದರ್ಶಿ ಬಿ. ಆರ್. ಸೇನರು ಪ್ರೊ. ರಂಗಾರವರಿಗೆ ಉತ್ತರ ಕೊಡುತ್ತ ಹಿಂದುಸ್ತಾನ ಸರಕಾರ ಆಹಾರ ಧಾನ್ಯ ಸಂಬಂಧದಲ್ಲಿ ಅರ್ಜೆಂಟಾಯಿನಕ್ಕೆ ಬಿನ್ನಹ ಮಾಡಿಕೊಳ್ಳುವ ವಿಚಾರ ನಡೆಸಿದೆಂದು ತಿಳಿಸಿದರು.

ಸರ್ ರಾಮಸ್ವಾಮಿ ಮುದ್ಲಿಯಾರರು ಅಹಮ್ಮದಜಾಫರರಿಗೆ ಉತ್ತರ ಕೊಡುತ್ತ ಸಿಮ್ಲಾದಲ್ಲಿ ಕೇಂದ್ರಶಾಸನ ಸಭೆಯ ಅಧಿವೇಶನ ಕರೆಯುವುದನ್ನು ಬಿಟ್ಟುಬಿಟ್ಟಿದ್ದರೂ ಸದ್ಯದ ಸರಕಾರ ಪುನಃ ವಿಚಾರ ಮಾಡಬಯಸುವದಿಲ್ಲೆಂದು ತಿಳಿಸಿದರು.

ಅನಂತರ ಕೂಲಿಕಾರ ಸಂಬಂಧದ ಪ್ರಚಾರಕ್ಕಾಗಿ ಹಿಂದೀ ಕೂಲಿಕಾರ ಮಹಾಮಂಡಳಕ್ಕೆ ಕೊಡಲಾಗುತ್ತಿರುವ ೧೩ ಸಾವಿರ ರೂಪಾಯಿ ಮಾಸಿಕ ಧನಸಹಾಯದ ಬಗ್ಗೆ ಪ್ರಶ್ನೋತ್ತರಗಳು ನಡೆದವು.

ಅಹಮ್ಮದಜಾಫರರು ಪ್ರಶ್ನೆ ಕೇಳುತ್ತ ಈ ಹಣದ ದುರುಪಯೋಗವಾಗಿಲ್ಲವೆ ? ಯಾವ ಕೆಲಸಕ್ಕಾಗಿ ಇದು ಕೊಡಲ್ಪಟ್ಟಿತ್ತೋ ಅದಕ್ಕಾಗಿ ಉಪಯೋಗವಾಗದೆ ಅಂಬೇಡಕರ ಪಕ್ಷದ ಪ್ರಚಾರದ ಸಲುವಾಗಿ ಉಪಯೋಗಿಸಲಾಯಿತೆಂದು ಹೇಳಿದರು.

ಅಂಬೇಡಕರರು ಸ್ವಲ್ಪ ಸಿಟ್ಟಿಗೆದ್ದು ನನ್ನ ಪಕ್ಷದ ಪ್ರಚಾರದ ಸಲುವಾಗಿ ಉಪಯೋಗಿಸಲಾಯಿತೆಂಬ ಮಾತನ್ನು ನಾನು ಆಕ್ಷೇಪಿಸುತ್ತೇನೆ. ಹಿಂದೀ ಕೂಲಿಕಾರ ಸಂಘಗಳ ಮಹಾಮಂಡಳವನ್ನು ನಾನು ಸೇರಿಲ್ಲೆಂದೆಂದರು. ಯುದ್ಧ ಮುಕ್ತಾಯದಿಂದ ಈ ಹಣ ಕೊಡುವದನ್ನು ನಿಲ್ಲಿಸಿದೆಂಬುದು ನಿಜವೇ ? ಎಂದು ಮಣಿಬೇನಕಾರಾ ಇವರು ಕೇಳಿದ್ದಕ್ಕೆ ಹೌದು ಎಂದು ಉತ್ತರಿಸಲಾಯಿತು.

ಎಂ ಎನ್. ರಾಯರ ಪಕ್ಷಕ್ಕೆ ಕೊಟ್ಟ ಹಣದ ಉಪಯೋಗ ಸರಿಯಾಗಿ ಆಗಿಲ್ಲೆಂದು ಸಂಶಯ ಬಂದದ್ದರಿಂದ ಅಧಿಕಾರೇತರ ಲೆಕ್ಕ ತಪಾಸಗರನ್ನು ನೇಮಿಸಿ ಆ ಹಣದ ವೆಚ್ಚಗಳನ್ನು ಪರಿಶೀಲಿಸುವದು ಇಷ್ಟವಲ್ಲವೆ? ಎಂದು ಕೇಳಿದ್ದಕ್ಕೆ ಪಬ್ಲಿಕ್ ಅಕೌಂಟ್ಸ ಕಮೀಟಿಯ ಮುಂದೆ ಅದರ ಲೆಕ್ಕ ಬಂದೇಬರುತ್ತವೆಂದು ಉತ್ತರ ಕೊಡಲಾಯಿತು.

ಹಿಂದೀ ಟೆಂಗಿನ ಕಾಯಿ ಕಮೀಟಿ ಕಾಯಿದೆ ತಿದ್ದುಪಡಿ ಮಸೂದೆ ಹಾಗೂ ಸಂರಕ್ಷಕ ಕರ ಹಾಗೆಯೇ ಮುಂದೆ ಸಾಗಿಸುವ ಮಸೂದೆ ಸ್ವೀಕೃತವಾದವು. ಸಂರಕ್ಷಕ ಕರಗಳ ಅವಧಿಯನ್ನು ೧೯೪೭ ನೇ ಎಪ್ರಿಲ ವರೆಗೆ ಬೆಳೆಸಲಾಯಿತು.

ಸಹಾಯಕ ಸ್ತ್ರೀದಳದ ಬಗ್ಗೆ ಬಂದ ಆರೋಪಗಳನ್ನು ವಿಚಾರಿಸಲು ಒಂದು ಸಮಿತಿಯನ್ನು ನೇಮಿಸಲಾಗುವದೋ ಎಂದು ಸತ್ಯನಾರಾಯಣ ಸಿಂಹರು ಕೇಳಿದ ಪ್ರಶ್ನೆಗೆ ಈ ರೀತಿ ಉತ್ತರ ಕೊಡಲಾಯಿತು. ಅದರಲ್ಲೇನಾದರೂ ತಪ್ಪಾಗಿದೆಂಬ ಸಂಶಯ ಬಂದರೆ ಮಾತ್ರ ವಿಚಾರಣಾ ಸಮಿತಿಯನ್ನು ನೇಮಿಸಬೇಕು. ಸರಕಾರಕ್ಕೇನೂ ಆ ರೀತಿ ಸಂಶಯವಿಲ್ಲ. ಒಂದುವೇಳೆ ಏನಾದರೂ ತಪ್ಪಾಗಿದ್ದರೆ ಅನೇಕ ಜನರು ಈ ದಳ ಬಿಟ್ಟು ಹೋಗುತ್ತಿದ್ದರು. ಈಗ ನೂರಕ್ಕೆ ೯೦ ರಷ್ಟು ಅಧಿಕಾರಿಗಳು ಈ ದಳದಲ್ಲೇ ಇದ್ದಾರೆ. ಇದನ್ನು ನೋಡಿದರೆ ಈ ದಳದಲ್ಲಿ ದೋಷವೇನೂ ಇಲ್ಲೆಂಬುದು ಸಿದ್ಧವಾಗುವದೆಂದು ಹೇಳಿದರು. ಓರ್ವ ಹಿಂದೀ ಮಹಿಳೆಯು ಉಚ್ಚ ಪದವಿಯಲ್ಲಿ ೮ ತಿಂಗಳ ವರೆಗಿದ್ದು ರಾಜೀನಾಮೆ ಕೊಟ್ಟ ಮಾತ್ರಕ್ಕೆ ಈ ದಳದ ೧೦೦ ಸದಸ್ಯರು ಯಾವದೋ ಪತ್ರಿಕೆಯಲ್ಲಿ ಸಿಕ್ಕಾಪಟ್ಟೆ ಬರೆದ ಮಾತ್ರಕ್ಕೆ ವಿಚಾರಣೆ ನಡೆಸುವದು ವೇಳೆಯ ದುರುಪಯೋಗವೆಂದು ಹೇಳಿದರು.

## ಸೈನ್ಯದ ಸಂಪೂರ್ಣ ಹಿಂದೀಕರಣ

### ಕೇಂದ್ರ ವಿಧಿಮಂಡಳದಲ್ಲಿ ಪಂ. ಕುಂಜರು ಇವರ ಗೊತ್ತುವಳಿ

ಇನ್ನು ೧೦ ವರ್ಷಗಳಲ್ಲಿ ಸೈನ್ಯವನ್ನು ಸಂಪೂರ್ಣ ಹಿಂದೀಕರಣ ಮಾಡಬೇಕು. ಈ ದೃಷ್ಟಿಯಿಂದ ಹಿಂದೀ ಸೈನ್ಯದಲ್ಲಿ ಲೆಫ್ಟನೆಂಟ ಮತ್ತು ಕ್ಯಾಪ್ಟನ್ ಹುದ್ದೆಗಳಿಗೆ ಯುರೋಪಿಯನ್‌ರನ್ನು ನೇಮಿಸಬಾರದೆಂದು ಮುಂತಾಗಿ ಪಂಡಿತ ಕುಂಜರುರವರು ಕೇಂದ್ರ ವಿಧಿಮಂಡಳದಲ್ಲಿ ಗೊತ್ತುವಳಿ ತಂದರು. ಬ್ರಿಗೇಡಿಯರ ಹಿಜಾಮುದ್ದೀನ, ತಿರುಮಲರಾಯ, ಕಾಲಿಕ್ಕರ, ಸರ್ ಗೋಪಾಲಸ್ವಾಮಿ ಅಯ್ಯಂಗಾರ ಮೋತೀಲಾಲ, ರೂಪಚಂದ, ರಾಜಾ ಯುವರಾಜ ದತ್ತಸಿಂಗ ಮೊದಲಾದವರು ಮಾತಾಡಿ ಹಿಂದೀಕರಣ ಅವಶ್ಯಕತೆಯನ್ನು ಪ್ರತಿಪಾದಿಸಿದರು. ಶ್ರೀ ಕಾಲಿಕ್ಕರರು ೫ ವರ್ಷಗಳಲ್ಲಿಯೆ ಹಿಂದೀಕರಣವಾಗಬೇಕೆಂದು ಹೇಳಿದರು. ಕೊನೆಗೆ ಸೇನಾಪತಿಗಳು ಉತ್ತರ ಕೊಡುತ್ತ ಸಂಪೂರ್ಣ ರಾಷ್ಟ್ರೀಯ ಸೈನ್ಯ ಸಿದ್ಧಪಡಿಸುವವೇ ಸರಕಾರದ ಉದ್ದೇಶವಾಗಿದೆಂದು ಹೇಳಿದರು.

ಶ್ರೀ ಜಿ ಎಸ್. ಮೋತೀಲಾಲರು ಕೇಳಿದ ಪ್ರಶ್ನೆಗೆ ಸೇನಾಪತಿಗಳು ಈ ರೀತಿ ಉತ್ತರಿಸಿದರು. ಹಿಂದುಸ್ತಾನದಲ್ಲಿ ೫೪೫೦ ಮಿಲಿಟರಿ ಮೋಟರು ಪ್ರವಾಸಿಕ ಮೋಟರುಗಳಿದ್ದವು. ಇವು ಇನ್ನೂ ಉಪಯೋಗಕ್ಕೆ ಬೇಕಾಗಿರುವವು, ಆದರೆ ೧೮೦೦ ಸರಕು ಹೇರುವ ಮೋಟಾರುಗಳಿದ್ದು ಇನ್ನೂ ೧೨ ತಿಂಗಳ ನಂತರ ಅವುಗಳಿಗೆ ಕೆಲಸವಿಲ್ಲದಂತಾಗುವದು. ಅನಂತರ ಪೂರೈಕೆ ಖಾತೆಯ ಕೆಲಸಕ್ಕೆ ಪ್ರಾಮುಖ್ಯತೆ ಕೊಡಲಾಗುವದೆಂದು ಹೇಳಿದರು.

ಚಿನ್ನದ ಮಾರಾಟದ ಸಂಬಂಧದಲ್ಲಿ ಕೇಳಿದ ಪ್ರಶ್ನೆಗೆ ಹಣಕಾಸಿನ ಖಾತೆಯ ಕಾರ್ಯದರ್ಶಿ ವಿ. ನರಹರಿರಾಯರು ಉತ್ತರ ಕೊಡುತ್ತ ಆಫ್ರಿಕೆಯ ಪರವಾಗಿ ಇಲ್ಲಿ ಚಿನ್ನವನ್ನು ಮಾರಿಲ್ಲ. ಅಮೇರಿಕೆಯ ಪರವಾಗಿ ಮಾತ್ರ ಮಾರಾಟ ಮಾಡಿರುತ್ತದೆ ೧೯೪೩ ಅಗಸ್ಟದಿಂದ ೧೯೪೫ ಅಗಸ್ಟ ೧೭ ರ ವರೆಗೆ ಅಮೇರಿಕೆಯ ಪರವಾಗಿ ೫೬೪೮೦೦೦೦೦ ರೂಪಾಯಿ ಬೆಲೆಯ ಚಿನ್ನವನ್ನು ಹಿಂದುಸ್ತಾನದಲ್ಲಿ ಮಾರಲಾಗಿದೆ.

# ಪಾಕಿಸ್ತಾನ ಸಾಧಿಸಲು ಆತ್ಯಂತಿಕ ತ್ಯಾಗಮಾಡುವ ನಿರ್ಧಾರ

## ಲೀಗ ಧುರೀಣರ ಸಭೆ

ಮುಸ್ಲಿಂ ಲೀಗ ಪಕ್ಷೀಯ ಶಾಸನಸಭಾಸದಸ್ಯರ ಸಭೆ ಜ್ಯಾ. ಜಿನ್ನಾರ ಅಧ್ಯಕ್ಷತೆಯಲ್ಲಿ ನಡೆದು ಪಾಕಿಸ್ತಾನವನ್ನು ಸಾಧಿಸುವದಕ್ಕಾಗಿ ಆತ್ಯಂತಿಕ ತ್ಯಾಗ ಮಾಡಬೇಕೆಂಬ ನಿರ್ಧಾರ ಮಾಡಲಾಯಿತಲ್ಲದೆ, ಪ್ರತಿಯೊಬ್ಬರು ಅದಕ್ಕೆ ಆಣೆ ತಕ್ಕೊಂಡರು. ಈ ಗೊತ್ತುವಳಿಯ ಮೇಲೆ ಲೀಗ ಧುರೀಣರು ಒಳ್ಳೇ ಆವೇಶಪೂರ್ಣ ಭಾಷಣ ಮಾಡಿದರು ಒಂದೇ ಘಟನಾ ಸಮಿತಿಯನ್ನು ನೇಮಿಸಿದ್ದಾದರೆ ಮುಸಲ್ಮಾನರು ಕತ್ತಿಯನ್ನು ಒರೆಯಿಂದ ಹಿರಿದು ಯುದ್ಧಕ್ಕೆ ಸಿದ್ಧರಾಗುವರು. ಹಿಂದುಗಳ ರಾಜ್ಯದಲ್ಲಿ ಮುಸಲ್ಮಾನರನ್ನು ನೂಕಲು ಬ್ರಿಟಿಶರು ಪ್ರಯತ್ನಿಸಿದ್ದಾದರೆ ಚೆಂಗಿಸಖಾನನ್ನು ಹಿಂದೆ ಸರಿಸುವಷ್ಟು ಅನರ್ಥವನ್ನು ಮುಸಲ್ಮಾನರು ಮಾಡುವರು ಎಂದೂ ಎಚ್ಚರಿಕೆ ಕೊಡಲಾಯಿತು. ಸರಹದ್ದದ ಅಬ್ದುಲ್‌ಕಯೂಮಖಾನರು ಮಾತಾಡುತ್ತ ಒಂದೇ ಧ್ವಜ, ಒಂದೇ ಕಾರ್ಯಕ್ರಮ ಮತ್ತು ಒಬ್ಬನೇ ಧುರೀಣ ನಮಗೆ ದೊರೆತಿದ್ದು ಪಾಕಿಸ್ತಾನದ ಬಗ್ಗೆ ನಾವು ಅವರ ಹುಕುಮಿನ ದಾರಿಯನ್ನೇ ನೋಡುತ್ತಿರುವೆವು ಅವರೊಮ್ಮೆ ಹುಕುಮು ಕೊಡಬೇಕು ಹಿಂದುಸ್ತಾನದಲ್ಲಿ ನಮ್ಮನ್ನು ಕೋಳಿಗಳಂತೆ ಬಚ್ಚಿಡುವ ಪ್ರಯತ್ನಮಾಡಿದರೆ ಕತ್ತಿಯನ್ನು ಒರೆಯಿಂದ ಹಿರಿದ ಹೊರತು ಗತ್ಯಂತರವುಳಿಯದೆಂದು ಹೇಳಿದರು. ಪಾಕಿಸ್ತಾನ ಚಳವಳಿಯಲ್ಲಿ ಮಹಿಳೆಯರು ತಮ್ಮ ಪಾಲಿನ ಕಾರ್ಯ ಮಾಡಲು ಸಿದ್ಧರಿರುವರೆಂದು ಬೇಗಮ ಶಹಾನವಾಜ ಬೇಗಮ ಅನೀಸ ರಸೂಲರು ಹೇಳಿದರು, ಒಮ್ಮೆ ಅವಕಾಶಕೊಟ್ಟು ನೋಡಿರಿ. ಮುಸಲ್ಮಾನರು ಏನು ಮಾಡಬಲ್ಲರೆಂಬದನ್ನು ಎಲ್ಲರ ನಿದರ್ಶನಕ್ಕೆ ತಂದು ಕೊಡುವೆವು. ಮುಸಲ್ಮಾನ ಕೈಗೊಂಬೆಗಳ ಸಹಾಯದಿಂದ ಸ್ಥಾಪಿತವಾದ ಪಂಜಾಬ ಮಂತ್ರಿಮಂಡಳವನ್ನು ಕ್ಷಣಾರ್ಧದಲ್ಲಿ ಉರುಳಿಸುವೆವೆಂದು ಶೌಕತ ಹಯಾತಖಾನರು ನುಡಿದರು. ಬ್ರಿಟಿಶರು, ಹಿಂದುಗಳು ಪಾಕಿಸ್ತಾನ ಕೊಡದಿದ್ದರೆ ರಶಿಯಾ ಅದನ್ನು ಕೊಡುವದೆಂದು ಸರ್ ಫಿರೋಜಖಾನ ನೂನರು ಹೇಳಿದರು. ಜಿನ್ನಾರ ಸಮಾರೋಪದ ನಂತರ ಸಭೆ ಕೊನೆಗಂಡಿತು.

## ಬೆಂಗಳೂರು

ಮೈಸೂರ ಸಂಸ್ಥಾನದ ಮೂಲ ಶಿಕ್ಷಣ ಸಮ್ಮೇಲನ ೭ ನೇ ತಾರೀಕು ಬೆಂಗಳೂರು ಗುರುಕುಲ ಆಶ್ರಮದಲ್ಲಿ ಪ್ರಾರಂಭವಾಯಿತು. ಅದರ ಪ್ರಾರಂಭೋತ್ಸವ ನೆರವೇರಿಸುತ್ತ ವರ್ಧಾ ನಯೀ ತಾಲೀಮಿ ಸಂಘದ ಸಹಕಾರ್ಯದರ್ಶಿ ಶ್ರೀ ಜಿ. ರಾಮಚಂದ್ರನ್‌ರು ಮೂಲ ಶಿಕ್ಷಣದ ಪ್ರಗತಿಯನ್ನು ಪ್ರಶಂಸಿಸುತ್ತ ಯಾವ ವಿಷಯಗಳಲ್ಲಿಯೂ ಹಿಂದ ಬೀಳದ ಮೈಸೂರು ಮೂಲ ಶಿಕ್ಷಣದಲ್ಲಿಯೂ ಹಿಂದೆ ಬೀಳಲಾರದೆಂದು ಆಶಿಸಿದರು. ಕೆ. ಸಂಪದ್ಗಿರಿರಾಯರು ಅಧ್ಯಕ್ಷತೆ ವಹಿಸಿದ್ದರು. ಇದೇ ಜೂನ ೧ ರೊಳಗಾಗಿ ಕೆಂಗೇರಿ ಗುರುಕುಲ ಆಶ್ರಮದಲ್ಲಿ ಅಧ್ಯಾಪಕರ ತರಬೇತಿ ಶಿಕ್ಷಣ ಶಿಬಿರವನ್ನು ತೆರೆಯಬೇಕೆಂದು ಗೊತ್ತಾಯಿತು.

ಆಹಾರ ಶಿಷ್ಟಮಂಡಳದೊಡನೆ ಪರದೇಶಕ್ಕೆ ಹೋಗಿದ್ದ ದಿವಾನ ಪ್ರಧಾನಶಿರೋಮಣಿ ಎನ್. ಮಾಧವರಾಯರು ತಮ್ಮ ಪ್ರವಾಸದ ಅನುಭವಗಳನ್ನು ಶ್ರೀಮನ್ಮಹಾರಾಜರಿಗೆ ವರದಿ ಮಾಡಿ ಬಂದರು.

ಮೈಸೂರು ಸರಕಾರದ ನಿವೃತ್ತ ಮಂತ್ರಿಗಳಾದ ಕೆ. ವಿ. ಅನಂತರಾಮನ್‌ರ ದೇಹಾರೋಗ್ಯ ಸರಿಯಿಲ್ಲದ್ದರಿಂದ ಅವರು ಬೆಂಗಳೂರಿನ ವಿಕ್ಟೋರಿಯಾ ಆಸ್ಪತ್ರಿಯಲ್ಲಿ ಚಿಕಿತ್ಸೆ ಪಡೆಯುತ್ತಲಿರುವರು. ಆರೋಗ್ಯ ಸುಧಾರಿಸುತ್ತ ನಡೆದಿದೆ.

ಜೂನ ೨೦ ನೆಯ ತಾರೀಕಿನಿಂದ ಮೈಸೂರು ನ್ಯಾಯ ವಿಧಾಯಕ ಸಭೆಯ ಆಯವ್ಯಯ ಅಧಿವೇಶನ ಬೆಂಗಳೂರಿನಲ್ಲಿ ಪ್ರಾರಂಭವಾಗಲಿದೆ.

ಬೆಂಗಳೂರು ಹೊಟೆಲ್ ಮಾಲಕರ ಸಂಘದವರು ೮ ನೇ ತಾರೀಕು ಆಹಾರ ಮಂತ್ರಿ ಜನಾಬ ಪಿ. ಎಸ್. ಎಸ್. ಶರೀಫರನ್ನು ಕಂಡು ದಂಡಿನಲ್ಲಿರುವಂತೆ ನಗರದಲ್ಲಿಯೂ ಕಾಫಿ ಮಾರಾಟಕ್ಕೆ ಕಾಲ ನಿರ್ಬಂಧವಿರಕೂಡದೆಂದೂ ಅಕ್ಕಿ ಅಥವಾ ಯಾವದರೊಂದು ರೇಶನ ಕೇಳಿಕೊಂಡರು ಮಂತ್ರಿಗಳು ವಿಚಾರ ಮಾಡುವುದಾಗಿ ಭರವಸೆಯಿತ್ತರೆಂದು ತಿಳಿಯುತ್ತದೆ.

ಆರೋಗ್ಯ ಮತ್ತು ಶಿಕ್ಷಣ ಸಚಿವರಾದ ಡಾ. ಟಿ. ಸಿ. ಎಂ. ರಾಯನ್‌ರವರು ಮುನಿಸಿಪಾಲಿಟಿ ಆರೋಗ್ಯಾಧಿಕಾರಿಗಳು ಮೊದಲಾದವರೊಂದಿಗೆ ೮ ನೇ ತಾರೀಕು ಬೆಳಗ್ಗೆ ಲಾಲಬಾಗ ಸಿದ್ದಾಪುರಕ್ಕೆ ಭೆಟ್ಟಿ ಕೊಟ್ಟರು. ಕಾಂಟ್ರ್ಯಾಕ್ಟರ ಎಸ್. ವೆಂಕಟಪ್ಪನವರೆ ಮೊದಲಾದವರು ಸ್ವಾಗತವನ್ನಿತ್ತರು. ಗ್ರಾಮದ ಹರಿಜನರು ತಮ್ಮ ಭಕ್ತಿಯನ್ನರ್ಪಿಸಿದರು. ಸಿದ್ದಾಪುರದ ಅಭಿವೃದ್ಧಿಗಾಗಿ ವಿಧವಿಧ ಸಹಾಯ ಮಾಡಿದ ಕಾಂಟ್ರ್ಯಾಕ್ಟರರು ಹರಿಜನ ವಸತಿಗಾಗಿ ೧೦ ಸಾವಿರ ರೂಪಾಯಿಗಳ ವಾಗ್ದಾನ ಮಾಡಿದರು. ಎಸ್. ವೀರಪ್ಪನವರು ಉಚಿತ ವಾಚನಾಲಯವೊಂದನ್ನು ಕಟ್ಟಿಸಿಕೊಡುವದಾಗಿ ಹೇಳಿದರು. ಗ್ರಾಮಸ್ಥರು ಬೀದಿಗಳ ಬಗ್ಗೆ ತಮ್ಮ ದೂರುಗಳನ್ನು ಸಚಿವರ ಸಮಕ್ಷಮ ದೂರಿಕೊಂಡರು. ಸಹಾಯ ಮಾಡುವುದಾಗಿ ಸಚಿವರು ಆಶ್ವಾಸನ ಕೊಟ್ಟರು.

ಅಖಿಲ ಕರ್ನಾಟಕ ಮಕ್ಕಳ ಕೂಟದ ಆಶ್ರಯದಲ್ಲಿ ನಡೆದ ವಿವಿಧ ಸ್ಪರ್ಧೆಗಳಲ್ಲಿ ಜಯಶೀಲರಾದ ಮಕ್ಕಳಿಗೆ ಪಾರಿತೋಷಕ ಹಂಚುವ ಸಮಾರಂಭ ಇದೇ ೩ ನೇ ತಾರೀಕು ಬೆಂಗಳೂರಿನ ಶಂಕರರಂಗ ಸಭಾಗೃಹದಲ್ಲಿ ನಡೆಯಿತು. ಎಸ್ ವೆಂಕಾಜಿರಾಯರು ಅಧ್ಯಕ್ಷತೆ ವಹಿಸಿ ಬಹುಮಾನ ಹಂಚಿದರು. ಅಧ್ಯಕ್ಷರು ಸಮಯೋಚಿತ ಭಾಷಣ ಮಾಡಿ ಇಂತಹ ಚಟುವಟಿಕೆಗಳನ್ನು ಅಭಿವೃದ್ಧಿಪಡಿಸಲು ತಾಯಿಂದಿರು ಹೆಚ್ಚು ಸಹಾಯ ಮಾಡಬೇಕೆಂದು ಕೇಳಿಕೊಂಡರು.

### ಆಕ್ಷೇಪಕ್ಕೆ ಸಮಾಧಾನ

ಬಳ್ಳಾರಿಯ ಶ್ರೀಮತಿ ಸುಮಂಗಲಮ್ಮನವರು ಬಳ್ಳಾರಿ ತಾಲೂಕ ಸ್ತ್ರೀ ಮತದಾರ ಸಂಘದಿಂದ ಆರಿಸಿ ಬಂದಿರುವರೆಂದು ನಾವು ಬರೆದುದನ್ನು ಕೆಲವರು ಆಕ್ಷೇಪಿಸಿ ಶ್ರೀಮತಿಯವರು ಬಳ್ಳಾರಿ ತಾಲೂಕ ಸಾಮಾನ್ಯ ಮತದಾರ ಸಂಘದಿಂದ ಆರಿಸಿ ಬಂದಿರುವರೇ ಹೊರತು ಸ್ತ್ರೀ ಮತದಾರ ಸಂಘದಿಂದಲ್ಲವೆಂದಿರುವರು. ಇದನ್ನು ನಾವೂ ಒಪ್ಪುತ್ತೇವೆ. ಆದರೆ ಆ ಸ್ಥಳ ಸ್ತ್ರೀ ಹುರಿಯಾಳುಗಳಿಗೆ ಮಾತ್ರ ಕಾದಿಟ್ಟಿದ್ದರಿಂದ ಹಾಗೆ ಬರೆಯುವ ರೂಢಿಯಿದೆ.




### ಮುಂಬಯಿ ಶೇರಪೇಟೆ

ತಾ. ೯—೪—೪೬

ಮುಂಬಯಿ ಶೇರ ಪೇಟೆ ಈ ವಾರ ಇಳಿಕೆಯಲ್ಲಿಯೆ ಇದ್ದಿತು. ತಾತಾ ಡೆಫರ್ಡ ಪಾಲುಗಳು ಹೆಚ್ಚಾಗಿ ಇಳಿದವು. ಪೇಟೆ ಪ್ರಾರಂಭದಲ್ಲಿ ಮಂದವಾಗಿದ್ದಿತು ಆದರೆ ಹಿಂದುಗಡೆ ಇಳಿಯುತ್ತಲೆ ನಡೆಯಿತು. ಟಾಟಾ ಸ್ಟೀಲ ಡೆಫರ್ಡ ಪಾಲುಗಳು ೨೯೩೨ ರಿಂದ ಪ್ರಾರಂಭವಾಗಿ ೨೯೦೦ ಕ್ಕಿಳಿದವು ಈ ದಿನ ಪೇಟೆ ಮುಚ್ಚುವ ಹೊತ್ತಿಗೆ ಅವು ೨೮೮೫ ಕ್ಕಿಳಿದವು. ಆರ್ಡಿನರಿ ಪಾಲುಗಳು ೫೧೮ ರಿಂದ ಪ್ರಾರಂಭವಾಗಿ ೫೧೬ ಕ್ಕಿಳಿದವು. ಪೇಟೆ ಮುಚ್ಚುವ ಹೊತ್ತಿಗ ೫೧೨ ಕ್ಕಿಳಿದವು. ಮುಂಬಯಿ ಡಾಯಿಂಗ ಪಾಲುಗಳು ೨೩೬೦ ಕ್ಕೆ ಪ್ರಾರಂಭವಾಗಿ ಏರಿಕೆಯ ಲಕ್ಷಣ ತೋರಿದರೂ ೨೩೩೧ ಕ್ಕಿಳಿದವು. ಪೇಟೆ ಮುಚ್ಚುವ ಹೊತ್ತಿಗೂ ಅದೇ ದರ ಉಳಿಯಿತು ಕೋಹಿನೂರ ಗಿರಣಿ ಪಾಲುಗಳು ೮೧೯ ಕ್ಕೆ ಪ್ರಾರಂಭವಾಗಿ ಸ್ವಲ್ಪಮಟ್ಟಿಗೆ ಹೆಚ್ಚಿ ೮೨೮ ಕ್ಕೆ ಉಳಿದವು. ಸೆಂಟ್ರಲ್ ಇಂಡಿಯಾ ಪಾಲುಗಳು ೪೬೪ ಹೇಳಲ್ಪಡುತಿದ್ದವು. ಸೆಂಚುರಿ ಪಾಲುಗಳು ೧೨೬೨ ರಕ್ಕಿಳಿದವು. ಗೋಕಾಕ ಗಿರಣಿ ಪಾಲುಗಳು ೮೧೭ ಹೇಳಲ್ಪಡುತಿದ್ದವು. ಅಸೋಸಿಯೇಟೆಡ್ ಸಿಮೆಂಟ ದರಗಳು ೨೫೦-೮-೦ ಇದ್ದವು.

೩॥ ದರದ ಸರಕಾರಿ ಪತ್ರಗಳು ೧೦೩-೩-೦ ಹೇಳಲ್ಪಡುತ್ತಿದ್ದವು. ರಿಜರ್ವ ಬ್ಯಾಂಕ ೧೬೯-೮-೦ ಇಂಪೀರಿಯಲ್ ಬ್ಯಾಂಕು ೨೪೯೦ ಪಿ. ಪಿ. ೬೩೮-೧೨-೦ ಸೆಂಟ್ರಲ್ ಬ್ಯಾಂಕು ೨೩೭

### ಚಿನ್ನ ಬೆಳ್ಳಿ

ಚಿನ್ನ-ಬೆಳ್ಳಿ ಪೇಟೆಗಳಲ್ಲಿ ಏರಿಳಿತಗಳು ಹೆಚ್ಚಾಗಿ ಕಂಡು ಬರುತ್ತದೆ. ಇದೊಂದು ಬಗೆಯ ಜೂಜಾಟದ ಅಡ್ಡೆಯಂತೆ ಪರಿಣಮಿಸಿದೆ. ಈ ದಿನ ಬೆಳ್ಳಿಯ ವಾಯದೆ ವ್ಯಾಪಾರವು ೧೬೨-೮ ಕ್ಕೆ ಪ್ರಾರಂಭವಾಗಿ ಸುಮಾರು ೧-೨-೦ ಕಡಿಮೆಯಾಯಿತು. ೧೬೦-೧೨-೦ ರ ವರೆಗೂ ಇಳಿದು ೧೬೧ ರೂಪಾಯಿಗೆ ಸ್ಥಿರವಾಗಿ ನಿಂತಿತು. ಬೆಳ್ಳಿ ತಯಾರಿ ಧಾರಣೆಯು ೨ ರೂಪಾಯಿ ಹೆಚ್ಚಿಗೆ ಅಂದರೆ ೧೬೩ ಇದ್ದಿತು.

ಚಿನ್ನ ಧಾರಣೆ ಇಂದು ಮುಂಜಾನೆ ೯೯ ರೂ. ಇದ್ದಿತು. ಆದರೆ ಬಹಳ ಚಿನ್ನ ಮಾರಾಟಕ್ಕೆ ಬಂದದ್ದರಿಂದ ಧಾರಣೆ ೯೮-೪-೦ ಕ್ಕಿಳಿಯಿತು. ಸಾವರಿನ್ ಧಾರಣೆ ೬೮-೮-೦ ಇದ್ದಿತು. ಹೀಗೆಯೆ ಏರಿಳಿತಗಳು ನಡೆದು ಕೊನೆಗೆ ಬೆಳ್ಳಿ ವಾಯದಾ ಮತ್ತು ತಯಾರಿ ಧಾರಣೆ ಅನುಕ್ರಮವಾಗಿ ೧೫೯-೧೪-೦ ಮತ್ತು ೧೬೧-೧೨-೦ ಕ್ಕಿಳಿದವು. ಚಿನ್ನದ ಧಾರಣೆ ೯೯-೪-೦ ಕ್ಕಿಳಿಯಿತು.

### ಅರಳಿ ಪೇಟೆ

ಅರಳಿ ಧಾರಣೆ ಸುಮಾರು ೩೫ ರೂ. ಕಡಿಮೆಯಾಗಿ ಅನಂತರ ೧೪ ರೂಪಾಯಿ ಹೆಚ್ಚಿತು. ಇದರಿಂದ ಧಾರಣೆ ಹೀಗೆಯೇ ಆಗಬಹುದೆಂದು ಯಾರೂ ಹೇಳಲೊಲ್ಲರು. ಅಂತೆಯೆ ಮೇ ವಾಯದೆ ಬೇಡಲು ವ್ಯಾಪಾರಸ್ಥರು ಮುಂದೆ ಬರಲೊಲ್ಲರು. ಕಳೆದ ಮೇದಲ್ಲಿ ೩ ಲಕ್ಷ ಗಂಟುಗಳ ವಾಯದೆ ವ್ಯವಹಾರ ಮಾಡಿದವರು ಹೊಡೆತ ತಿಂದದ್ದರಿಂದ ಈಗ ಹೆಚ್ಚು ಬುದ್ಧಿಗಲಿತಿದ್ದಾರೆ. ಈ ಧೋರಣವಿದ್ದುದರಿಂದ ಧಾರಣೆ ಸುಧಾರಿಸಬಹುದೆಂದು ಆಶಿಸುವಂತಿಲ್ಲ. ಮೇ ವಾಯದೆ ೪೫೩-೮-೦ ಕ್ಕೆ ಪ್ರಾರಂಭವಾಗಬಹುದೆಂದೆನಿಸಿತ್ತು ಆದರೆ ವ್ಯಾಪಾರ ೪೫೩ ರಿಂದಲೆ ಪ್ರಾರಂಭವಾಯಿತು. ಮುಂದೆ ಅದು ೪೫೧ ಕ್ಕಿಳಿಯಿತು. ಮುಂದೆ ಅದು ೪೫೨-೮-೦ ವರೆಗೆ ಏರಿತು. ಹೀಗೆ ಏರಿಳಿತಗಳಾಗಿ ಕೊನೆಗೆ ಮೇ ವಾಯಿದೆ ೪೫೬-೧೨-೦ ಜುಲೈ ೪೬೫-೮ ಮತ್ತು ಸಪ್ಟೆಂಬರ ೪೭೨-೮-೦ ಧಾರಣೆಗಳಿಂದ ಪೇಟೆ ಮುಚ್ಚಿತು.

### ಎಣ್ಣೆ ಕಾಳು

| | | |
|---|---|---|
| ಶೇಂಗಾ | ರೂ. | ೧೧೬—೦—೦ |
| ಅಗಸಿ | ,, | ೨೪—೦—೦ |

### ಶಿವಮೊಗ್ಗೆ

| | |
|---|---|
| ದೇಶಾವರ ಅಡಿಕೆ ನಂ. ೧ (ಮಣ) ರೂ. | ೨೦—೨೪ |
| ,, ,, ೨ | ೧೮—೨೨ |
| ತೊರಸಾಲು | ೧೭—೨೦ |
| ವಂತಿಬೆಟ್ಟ | ೧೩—೧೪ |
| ಬೆಟ್ಟೆ | ೧೨—೧೩॥ |
| ರಾಜಾ ಆಲವು | ೨೩—೨೪ |

ಪೇಟೆ ಒಂದೇ ತೆರ ಇದೆ.

### ಸಾಂಗಲಿ ಪೇಟೆ

| | | |
|---|---|---|
| ಬೆಲ್ಲ ಬಂಗಾಲಿಮಣ | ರೂ. | ೧೬—೧೪ |
| ಅರಿಸಿಣ ಹೇರು | ,, | ೬೯—೭೮ |
| ಮೆಣಸಿನಕಾಯಿ ಹೇರು | ,, | ೧೫೦—೧೯೦ |
| ಶೇಂಗಾ (ಖಂಡಿ) | ,, | ೯೫ |
| ಮಿರಜಿ ತಂಬಾಕು (ಹೇರು) | | ೧೦೦—೨೦೦ |

ಸರಕಾರದವರು ಬೆಲ್ಲದ ಧಾರಣೆಯನ್ನು ನಿಯಂತ್ರಿಸುವರೆಂದು ಮುಂಬಯಿಯಿಂದ ಸುದ್ದಿ ಬಂದದ್ದರಿಂದ ವ್ಯಾಪಾರಸ್ಥರು ಬೆಲ್ಲದ ವ್ಯಾಪಾರವನ್ನು ಸಾಧಾರಣ ನಿಲ್ಲಿಸಿದಂತಾಗಿದೆ. ಬೆಲ್ಲ ಹೊರಗಿನಿಂದ ಬರುವದು ಯಥಾಪ್ರಕಾರ ಇದೆ. ಶೇಂಗಾದ ಆಯಾತವೂ ನಿಂತಂತಾಗಿದೆ. ವ್ಯವಹಾರವೆಲ್ಲ ವಿಶಿಷ್ಟ ವ್ಯಾಪಾರಿಗಳ ಮತ್ತು ಗಿರಣಿಗಾರರ ಕೈಯಲ್ಲಿರುವುದರಿಂದ ಅವರು ಮಾಡಿದ್ದೆ ಧಾರಣೆಯೆಂಬ ಪರಿಸ್ಥಿತಿಯುಂಟಾಗಿದೆ. ಇತ್ತೀಚಿನ ಮಳೆಯಿಂದ ತಂಬಾಕು ತೊಯ್ದುಹೋದ್ದರಿಂದ ಒಕ್ಕಲಿಗರಿಗೆ ಬಹಳ ಹಾನಿಯಾಯಿತು. ವ್ಯಾಪಾರಸ್ಥರಿಗೂ ತಂಬಾಕಿಗೆ ನೀರು ಹತ್ತದಂತೆ ಇಡುವದು ಸಾಧ್ಯವಾಗದ್ದರಿಂದ ಅವರದೂ ಹಾನಿಯಾಯಿತು. ಹೊರಗೆ ಬಿದ್ದ ತಂಬಾಕೆಲ್ಲ ತೊಯ್ದು ಹೋಯಿತು.

### ಹುಬ್ಬಳ್ಳಿ ಪೇಟೆ

ಹತ್ತಿಕಾಳಿನ ಸಂಬಂಧವಾಗಿ ವರ್ತಕರ ಸಂಪು ಇನ್ನೂ ನಡೆದದ್ದರಿಂದ ವ್ಯಾಪಾರವಿಲ್ಲ.

## ಭಾರತದ ಆಹಾರ ಸಮಸ್ಯೆ

### ಪ್ರಧಾನಾಮಾತ್ಯ ಮಾಧವರಾಯರ ಅಭಿಪ್ರಾಯ

ಆಹಾರ ಶಿಷ್ಟಮಂಡಳದಲ್ಲಿ ಸದಸ್ಯರೆಂದು ಪರದೇಶಕ್ಕೆ ಹೋಗಿದ್ದ ಮೈಸೂರಿನ ಪ್ರಧಾನಾಮಾತ್ಯ ಎನ್. ಮಾಧವರಾಯರು ಬೆಂಗಳೂರಿನ ಸರ್ ಪುಟ್ಟಣಚೆಟ್ಟಿ ಪುರಭವನದಲ್ಲಿ ೫ ನೇ ತಾರೀಕು ಬ್ರಹ್ಮದೇಶ ವಿಜಯ ಚಿತ್ರಪ್ರದರ್ಶನ ಭಾಷಣ ಮಾಡುತ್ತ ಭಾರತದ ಆಹಾರ ಸಮಸ್ಯೆಯನ್ನೂ ವಿಮರ್ಶಿಸಿದರು. ಭಾರತವಿಷ್ಟೊಂದು ವಿಶಾಲ ರಾಷ್ಟ್ರವಾಗಿದ್ದು ಜನಬಲ ಬೇಕಾದಷ್ಟಿದ್ದರೂ ತನಗೆ ಬೇಕಾಗುವಷ್ಟು ಆಹಾರವನ್ನು ಏಕೆ ಉತ್ಪಾದನ ಮಾಡಬಾರದು. ಎಂದು ಪಾಶ್ಚಾತ್ಯ ರಾಷ್ಟ್ರಗಳು ಕೇಳುತ್ತಿವೆ. ಇದು ನ್ಯಾಯವಾದ ಪ್ರಶ್ನೆ. ಸಾವಿರಾರು ಮೈಲು ದೂರವಿರುವ ಅಮೇರಿಕೆಗೆ ಹೋಗುವದು ಬಹಳ ಅಪಮಾನಕರ. ದೊಡ್ಡ ಪ್ರಮಾಣದಲ್ಲಿ ಆಧುನಿಕ ವ್ಯವಸಾಯ ಯಂತ್ರಗಳನ್ನು ಉಪಯೋಗಿಸಿ ಒಂದು ಯೋಜನೆಯಿಂದ ಉತ್ಪತ್ತಿ ಮಾಡಿದರೆ ನಮಗೆ ಬೇಕಾಗುವಷ್ಟು ಧಾನ್ಯವನ್ನು ಬೆಳೆದುಕೊಳ್ಳಬಹುದು. ಮತ್ತು ಯುದ್ಧಕ್ಕೆ ಮೊದಲ-ಭಾರತಕ್ಕೆ ಧಾನ್ಯವನ್ನು ಕಳಿಸುತ್ತಿದ್ದ ರಾಷ್ಟ್ರಗಳಿಗೂ ಸಹಾಯ ಮಾಡಬಹುದು ಎಂದು ಮುಂತಾಗಿ ಹೇಳಿದರು.

## ದಕ್ಷಿಣ ಕನ್ನಡ

ಸೆಂಟ್ರಲ್ ಕೋಆಪರೇಟಿವ್ ಸೊಸಾಯಿಟಿಯವರ ಸೂಚನೆಯಂತೆ ಪುತ್ತೂರ ತಾಲೂಕಿನ ಕೆಲ ಹಳ್ಳಿಗಳ ಜನರು ಎರಡನೆ ಭತ್ತದ ಬೆಳೆಯೊಪ್ಪಿಸುವ ಅವಧಿಯನ್ನು ತಾ. ೩೦—೪—೪೬ ರ ವರೆಗೆ ಹೆಚ್ಚಿಸಲಾಗಿದೆ. ತಾ॥ ೧-೫-೪೬ ರಿಂದ ಕಡಮೆ ದರದಲ್ಲಿ ಒಪ್ಪಿಸಬೇಕಾದೀತು.

ಪುತ್ತೂರ ತಾಲೂಕಾ ಸಂಪಾಜ ಪ್ರಾ[illegible] ಸುಬ್ರಾಯ ಆಚಾರಿ ತನ್ನ ಹೆಂಡತಿಯ [illegible] ಮಾಡಿದ ಆರೋಪಕ್ಕಾಗಿ ಸೆಶನ್ಸ ಜಜ್ಜರು [illegible]ವರಿಗೆ ಗಲ್ಲಿನ ಶಿಕ್ಷೆ ವಿಧಿಸಿದರು.

ದಕ್ಷಿಣ ಜಿಲ್ಲಾ ಹೊಗೆಸೊಪ್ಪಿನ ಬೇಸಾಯಗಾರರ ಸಂಘದ ಯೂನಿಯನ್ನಿನ ಸಮ್ಮೇಲನ ೬ ನೇ ತಾರೀಕು ಮಂಗಳೂರಿನ ಜಿ. ಕೆ. ಗೋವಿಂದ ಭಟ್ಟರ ಅಧ್ಯಕ್ಷತೆಯಲ್ಲಿ ಜರುಗಿತು. ಅಬ್ದುಲ್ ಕಾದರ ಸಾಹೇಬರು ಸ್ವಾಗತ ಭಾಷಣ ಮಾಡಿದರು. ಅಧ್ಯಕ್ಷರ ಭಾಷಣದ ನಂತರ ಕಾರ್ಯದರ್ಶಿಗಳು ವರದಿ ಓದಿದರು. ಕಿಸಾನ ಸಂಘದ ಕಾರ್ಯದರ್ಶಿ ಕೆ. ಮಾಧವನ್‌ರು ಮಾತಾಡುತ್ತ ಅಡಿಕೆ ಬೇಸಾಯಗಾರರು ಸಂಘಟಿಸಿ ದುಡಿದುದರ ಫಲವಾಗಿ ಸುಂಕ ಕಡಿಮೆಯಾಯಿತು. ನಾವಾದರೂ ಅದರಂತೆ ಸಂಘಟನೆ ಮಾಡಿಕೊಂಡು ಕಷ್ಟಪರಿಹಾರ ಹೊಂದಬೇಕೆಂದು ಕೇಳಿಕೊಂಡರು. ತಂಬಾಕದ ಮೇಲಿನ ಕರವನ್ನು ಪೂರ್ಣ ತೆಗೆದುಹಾಕಬೇಕೆಂದು ಮುಂತಾದ ಗೊತ್ತುಗಳು ಸ್ವೀಕೃತವಾದವು.

ಕೆಲವು ವರ್ಷಗಳಿಂದ ಪುತ್ತೂರಲ್ಲಿ ಡೆಪ್ಯುಟಿ ಕಲೆಕ್ಟರರ ಕಾರಕೂನರಾಗಿದ್ದ ಶ್ರೀ ಬಿ. ಎ[illegible] ರಾವ್ ಇವರ ಮೇಲೆ ಸರಕಾರಿ ಹಣ ದುರುಪಯೋಗ ಮಾಡಿದ ಆರೋಪದ ಮೇಲೆ ಖಟ್ಲೆ ನಡೆದಿತ್ತಷ್ಟೆ. ಅದರ ವಿಚಾರಣೆ ಮುಗಿದು ಅವರಿಗೆ ೯ ತಿಂಗಳ ಶಿಕ್ಷೆ ಮತ್ತು ೧೦೦ ರೂಪಾಯಿ ದಂಡ ವಿಧಿಸಲಾಯಿತು. ಅವರನ್ನೀಗ ಜಾಮೀನಿನ ಮೇಲೆ ಬಿಡುಗಡೆ ಮಾಡಿದೆ.

## ಬೆಂಗಳೂರ ಜಿಲ್ಲೆಯಲ್ಲಿ ಆಹಾರ ದುಃಸ್ಥಿತಿ

### ಅಗಸ್ಟ ತಿಂಗಳಿಂದ ಎಲ್ಲರೂ ಗೋದಿಯನ್ನೆ ತಿನ್ನಬೇಕಾಗಬಹುದು

ಬೆಂಗಳೂರು ಜಿಲ್ಲಾಧಿಕಾರಿಗಳು ಕಳೆದ ಶನಿವಾರ ಪತ್ರಿಕಾ ಪ್ರತಿನಿಧಿಗಳ ಸಭೆ ಕರೆದು ಜಿಲ್ಲೆಯ ಆಹಾರ ಪರಿಸ್ಥಿತಿಯನ್ನು ವಿಮರ್ಶಿಸಿದರು. ಡಿಸೆಂಬರ ಕೊನೆಯೊಳಗಾಗಿ ಜಿಲ್ಲೆಗೆ ೩ ಲಕ್ಷ ಪಲ್ಲ ಧಾನ್ಯ ಕಡಮೆ ಬರುವ ಸಂಭವವಿದೆಯೆಂದು ಅವರು ತಿಳಿಸಿದರು. ಕಳೆದ ವರ್ಷ ೨೮೪೬೪೬ ಪಲ್ಲ ಭತ್ತ ಮತ್ತು ೧೧೨೨೮೨ ಪಲ್ಲ ರಾಗಿ ಬೆಳೆದಿದ್ದಾರೆ. ಈ ವರ್ಷ ಮಳೆ ಸಾಕಷ್ಟು ಆಗದ್ದರಿಂದ ಕೇವಲ ೧೪೮೩೪೨ ಪಲ್ಲ ಭತ್ತ ಮತ್ತು ೭೮೨೯೦ ಪಲ್ಲ ರಾಗಿ ಬಂದಿದೆ. ಬೆಂಗಳೂರು ಸಾಮಾನ್ಯವಾಗಿ ಭತ್ತ ಸಾಕಷ್ಟು ಬೆಳೆವುದಿಲ್ಲ. ಹೊರಗಿನಿಂದ ತರಿಸಬೇಕಾಗುತ್ತಿತ್ತು ಈ ವರ್ಷವಂತೂ ಬೆಳೆಯೆ ಕಡಮೆ ಬಂದದ್ದರಿಂದ ಹೆಚ್ಚು ಕೊರತೆಯೆನಿಸಿದೆ. ಈ ಜಿಲ್ಲೆಗೆ ಡಿಸೆಂಬರ ಕೊನೆಯ ವರೆಗಿನ ೩ ಲಕ್ಷ ಪಲ್ಲ ಧಾನ್ಯದಲ್ಲಿ ೮೦೦೦ ಪಲ್ಲ ಅಕ್ಕಿ ಮತ್ತು ೧೨೦೦೦೦ ಪಲ್ಲ ಗೋದಿ ವಸ್ತುಗಳನ್ನು ಪೂರಯಿಸಲಾಗುವದೆಂದು ಆಹಾರ ಶಾಖೆಯ ಡಾಯರೆಕ್ಟರರುಗಳು ಹೇಳಿರುವರು. ಇದರಿಂದ ವರ್ಷಕ್ಕೆ ೧೮೯೬೦೦ ಪಲ್ಲ ಕೊರತೆಯೆನಿಸುವದು. ಇಷ್ಟನ್ನು ಆಹಾರ ಶಾಖೆಯಿಂದ ಪಡೆಯಲು ಪ್ರಯತ್ನಿಸಬೇಕಾಗುವದು. ಆಹಾರ ಪದಾರ್ಥಗಳ ಕೊರತೆಯೆನಿಸಿದ್ದರಿಂದ ಸರಕಾರದ ಡಿಪೋಗಳಲ್ಲಿ ೩೦೦೦ ಮೂಟೆ ಕಡಲೆ ಕಾಯಿಯನ್ನು ಸಂಗ್ರಹಿಸಲಾಗಿದೆ.

ಬೆಂಗಳೂರು ನಗರಕ್ಕಾಗಿ ಹಾಲಿನ ಪುಡಿಯನ್ನು ತರಿಸಿ ಹೊಟೆಲದವರಿಗೆ ಕೊಟ್ಟರೆ ಹಾಲು ಸಾರ್ವಜನಿಕರ ಉಪಯೋಗಕ್ಕೆ ಉಳಿಯುವದು. ಬೆಂಗಳೂರು ನಗರದಲ್ಲಿಯ ಹೊಟೆಲಿನವರು ತಿಂಗಳಿಗೆ ೧೦೦೦ ಟನ್ನುಗಳಷ್ಟು ಹಾಲನ್ನು ಉಪಯೋಗಿಸಿಕೊಳ್ಳುತ್ತಿರುವರೆಂದು ಮುಂತಾಗಿ ಜಿಲ್ಲಾಧಿಕಾರಿಗಳು ಹೇಳಿದರು.

# ಆಳು ಮಗ

(ಶ್ರೀಕೃಷ್ಣ ಪಾಟೀಲ ಕಲಾಮಂಟಪ ಬೆಳಗಾವಿ)

ಆಳುಮಕ್ಕಳನ್ನು ಕೆಲವರು ದನಗಳಂತೆ ನಡಿಸಿಕೊಳ್ಳುವರು; ಕೆಲವರು ಅರಸುಮಕ್ಕಳಂತೆ ನಡಿಸಿಕೊಳ್ಳುವರು. ಆದರೆ ಆಳುಗಳು ತಮ್ಮನ್ನು ಆಳುಗಳಂತೆ ನಡಿಸಿಕೊಂಡರೆ ಸಂತೋಷವಲ್ಲಿರುವರು.

ಮಹಾತ್ಮಾ

ಮನೆಯಲ್ಲಿ ಶಾಮುರಾಯರಿಗೆ ಗೋವಿಂದನೆಂಬ ಮಗನಿರುವನು. ಅವನು ಅವರ ಮನೆಗೆ ಕೈದೀವಟಿಗೆ. ಗೋವಿಂದನ ಅಪರಾಧಗಳೆಲ್ಲ ಶ್ಯಾಮುರಾಯರಿಗೆ ಹುಡುಗಾಟಿಕೆಗಳು. ಇಂಥ ಹುಡುಗಾಟಿಕೆಗಳಿಗೆ ತುಟಿ ಎರಡು ಮಾಡುತ್ತಿರಲಿಲ್ಲ. ನಕ್ಕು ಬಿಡುವರು. ನಗೆಯ ಅರ್ಥ ಬೆದರಿಕೆಯೋ, ಪ್ರೋತ್ಸಾಹನವೋ? ದೇವರೆ ಬಲ್ಲ. ಹೀಗಾಗಿ ಗೋವಿಂದನಿಂದ ನೊಂದದ ನೆರೆಹೊರೆಯರಿದ್ದಿಲ್ಲ. ಶಾಮುರಾಯರು ಪೋಲೀಸಖಾತೆಗೆ ಸಂಬಂಧಿಸಿದವರು. ಆ ಓಣಿಗೆ ಅವರ ಅಮಲ ಬಹಳ.

ಪಾಪ! ಆ ಬಡ ನಾಯಿಯು ಮೆಲ್ಲಗೆ ಕುಂಟುತ್ತ ನಡೆದಿದೆ. ಗೋವಿಂದನು ಅದಕ್ಕೆ ಒಂದಿಷ್ಟು ತಿಂಡಿಯ ಆಸೆಯನ್ನು ತೋರಿಸಿದನು. ಮೊದಮೊದಲು ನಾಯಿಯು ಹತ್ತರ ಬರಲಿಲ್ಲ. ದೂರದಿಂದ ಬಾಲವನ್ನು ಅಲ್ಲಾಡಿಸಿತು. ಮತ್ತಿಷ್ಟು ಮುಂದೆಹೋಗಿ ತಿಂಡಿಯನ್ನು ತೋರಿಸಿದನು. ಮೂಕಪ್ರಾಣಿಯ ಬಾಯಲ್ಲಿ ನೀರೂರಿತು. ಪ್ರೇಮದಿಂದ ಕರೆಯುವನೆಂದು ಗ್ರಹಿಸಿತು. ತಿಂಡಿಯ ಬಳಿಗೆ ಬಂದು ಮೂಸಿ ನೋಡಿರಬೇಕು! ಕಲ್ಲು ತೆಗೆದುಕೊಂಡು ಬೀಸಿದನು. ಕಲ್ಲು ಭರ್ ಎಂದು ಒದರುತ್ತ ಧಮ್ ಎಂದು ತಾಗಿತು. ನಾಯಿಯು ಕುಂಯ್ ಎಂದು ಒದರಾಡಿ ತನ್ನ ಎಲುವಿನಗೂಡಿನ ಮೈಯನ್ನು ಶಾಮುರಾಯರ ಮನೆಯ ಮುಂದೆ ಮೂರುಸಾರೆ ಉರುಳಾಡಿಸಿ ಕುಂಟುತ್ತ, ಕುಂಯ್‌ಗುಡುತ್ತ ಓಡಿತು! ಬೀದಿಯ ಹೆಣ್ಣುಮಕ್ಕಳು ಬಾಗಿಲಲ್ಲಿ ನಿಂತು ಹಾಯ್! ಎಂದರು. ಗೋವಿಂದನು ಕೇಕೆ ಹಾಕಿ ಕುಣಿದಾಡಹತ್ತಿದನು.

ಆಳು ಹೊರಗೆ ಬಂದು— ಗೋವಿಂದಪ್ಪಾ, ಪಾಪ ನಾಯಿಯನ್ನು ಬಡಿಯಬೇಕೆ? ಎಂದು ಕರುಣೆಯಿಂದ ಕೇಳಿದನು.

ಅದು ನನ್ನ ತಿಂಡಿಯನ್ನು ತಿನ್ನಬೇಕೆ? ಎಂದು ಕೇಳಿದನು.

ಒಳಗಿನಿಂದ ಯಜಮಾನತಿಯು-ಶಾಮುರಾಯರ ಹೆಂಡತಿಯ ಕೂಗು ಗುಡುಗಿನಂತೆ ಹೊರಬಂದಿತು. ಬಸವನು ಸನ್ನೆದು ಹೋದನು.

ನಿನಗೆ ಸಾವಿರಸಾರೆ ಹೇಳಿದರೂ ಮತ್ತೆ ನಿನ್ನದು ಅದೇ ಹಾಡು! ಹೊಲೆಯಾ, ನಮ್ಮನ್ನು ಸಹ ಪೋಲೀಸರಿಗೆ ಕಳಿಸಬೇಕೆಂದಿರುವಿ ಏನು? ದೇವರಮನೆಯಂದರೆ ಗೊತ್ತಿಲ್ಲ. ದಿಂಡರಮನೆಯಂದರೆ ಗೊತ್ತಿಲ್ಲ. ಆ ಸುಜ್ಜ ಸಿಂದೀ ಕಸಬರಿಗೆಯನ್ನು ಅಡಿಗೆಮನೆಯಲ್ಲಿ ಇಟ್ಟಿರುವೆ. ಹೊಟ್ಟೆಗೆ ಅನ್ನ ತಿನ್ನುವೆಯೋ ಇಲ್ಲವೋ? ಮೊನ್ನಿನ ಸಾರೆಯೇ ನಿನ್ನನ್ನು ಒದ್ದು ಹಾಕಬೇಕೆಂದು ಮಾಡಿದ್ದೆ! ಅವರ ಮಾತು ಕೇಳಿ ಇಟ್ಟುಕೊಂಡಿರುವೆ ಕೂಳು ತಿಂದು ತಿಂದು ಸೊಕ್ಕಿಗೆ ಬಂದಿರುವಿ. . . ಎಂದು ಬುಸುಗುಟ್ಟಿದಳು.

--ಯವ್ವಾ, ನಾಯಿಗೆ ಗೋವಿಂದಪ್ಪನವರು ಕಲ್ಲ ಒಗೆದರು. ಕರಿನಾಕ ಹೋಗಿದ್ನಿ! ತಪ್ಪಾತು ಎಂದು ಬೇಡಿಕೊಂಡನು.

—ಊರ ಹದಿನೆಂಟು ಕಾರಭಾರ ಬೇಕು! ಅವನು ನಾಯಿಗೆ ಕಲ್ಲೊಗದನೆಂದು ಯಾರು ಹೇಳಿದರು! ನೀನೇ ಒಗೆದಿರಬೇಕು. ನಾಯಿಗೆ ಕತ್ತಿಗೆ ಕಲ್ಲ ಒಗಿಯೋದು ಅವನ ಕೆಲಸ ಅಂತ ತಿಳಿದೀದಿ ಏನು? ಎಂದು ಗದ್ದರಿಸಿದಳು.

—ಹೆದರಿ.. ಅವನ... ಎಂಬ ಮಾತುಗಳನ್ನು ತಡೆದು

—ಸೂಳೇಮಗನ. ತಿರಗಿ ಮಾತಾಡತೀ! ಯಾರೋ ಹೊಲೆಯರು ಒಗೆದರೂ ನಿನಗೆ ಅವನ ಕಾಣಿರಬೇಕು! ಹುಡುಗ ತಿಂಗೇದಿ ಅವ ಅಂತ ಓಣಿಯವರು ಹೇಳಿದ ಮಾತ ನಿನಗ ಖರೆ! ನಮ್ಮ ಮನಿ ಅನ್ನ ನಮಗ ಬುದ್ಧೀ ಹೇಳಲಿಕ್ಕೆ ಬರತದ! ತಿಂದ ಕೂಳ ತಿಂದಿದ್ದರ ನಿನಗ ನೀನು ಯಾರು ಅಂತ ತಿಳೀತಿತ್ತು. ಖಮ್ಮಗ ತಿಂತೀದಿ...

—ಅವ ಒಗದದ್ದ ನಾನೋಡೀನರಿ? ನಡುವೆ ಬಸವನು ಅಂದನು.

—ಸೂಳೇಮಗನೇ!...ಎಂದು ಕೈಯಲ್ಲಿ ತಂಬಿಗೆಯನ್ನು ಬಸವನ ಕಡೆಗೆ ಯಜಮಾನತಿಯು ತೂರಿ—ಅವರು ಬರಲಿ ನಿನ್ನ ಮೈ ಹುಳಿ ಮಾಡಲಿಲ್ಲ ಅಂದರ ನೋಡು? ಎಂದು ಹುಬ್ಬು ಏರಿಸಿ, ಮೂಗು ಹಿಗ್ಗಿಸಿ, ತುಟಿಕಟಿದು ಗದ್ದರಿಸಿ ಒಳಗೆ ಹೋದಳು.

ಹೆಂಗಸಿನ ಕೈಯಿಂದ ಈ ರೀತಿ ಅವಮಾನಿತನಾಗುವದು ಬಸವನಿಗೆ ಅಸಹ್ಯವೆನಿಸಿತು. ಹೆಂಗಸನ್ನು ಆಳಾಗಿ ನಡಿಸಿಕೊಳ್ಳುವ ತಾನು—ಗಂಡಸೆಂಬ ಅಭಿಮಾನವು ಜಾಗ್ರತವಾಯಿತು. ಕಟ್ಟಿಕೊಂಡುನಿಂತ ಕೈಗಳು ಜಾರಿ ನೇತಾಡಹತ್ತಿದವು. ದೀರ್ಘವಾಗಿ ಶ್ವಾಸಗರೆಯುತ್ತಿದ್ದದರಿಂದ ಹೊಟ್ಟೆಯು ಒಳಗೆ—ಹೊರಗೆ ಉಬ್ಬಿಕೊಂಡ ಬರುತ್ತಿತು. ಕೈಗಳು ಜಾರಿ ಕೆಳಗೆ ಬೀಳುವ ಮುಂದೆ ಹೊಟ್ಟೆಯನ್ನು ಸ್ಪರ್ಶಿಸಿದವು—ಈ ಹೊಟ್ಟೆಗಾಗಿ ಅಲ್ಲವೇ? ಎಂದು ಶಪಿಸಿಕೊಂಡನು

ಬಸವನ ತಲೆಯಿಂದ ಇನ್ನೂ ರಕ್ತವು ಹನಿಹನಿಯಾಗಿ ಇಳಿಯುತ್ತಿದ್ದಿತು. ಜೋಲುಮೋರೆ ಹಾಕಿಕೊಂಡು ಪಡಸಾಲೆಯಲ್ಲಿ ಹೋಗಿ ಕುಳಿತನು. ಎದುರಿನ ಓಣಿಯು ಚೆನ್ನಾಗಿ ಕಾಣುತ್ತಿದ್ದಿತು ಭಾರಹೊತ್ತುಕೊಂಡು ಓಡಾಡುವ ಕೂಲಿಗಳು, ನವಕರಿಯ ಗಡಿಬಿಡಿಯಲ್ಲಿಯ ಸದ್ಗೃಹಸ್ಥರು ಕಣ್ಣು ತುಂಬ ಕಂಡರು. ಅವರ ಮುಂದೆ ತನ್ನ ಜೀವನವು ನಿಕೃಷ್ಟವೆಂದುಕೊಂಡನು.

ರಕ್ತ ಹರಿಯುವದು ನಿಂತಿತು. ಮೈಮೇಲಿನ ಅಂಗಿ ರಕ್ತದಿಂದ ಕಲೆಗೂಡಿದ್ದಿತು. ನೋಡಿದರೆ ಭೀತಿ ಬರಬೇಕು. ಎದುರು ಕನ್ನಡಿಯಲ್ಲಿ ನೋಡಿಕೊಂಡನು. ಯಜಮಾನತಿಯ ಮನೆಯ ಅನ್ನದ ರಕ್ತ ಹರಿದುಹೋಯಿತು ಎಂದುಕೊಂಡನು. ಹೊಸ ಅಂಗಿಯನ್ನು ತೊಟ್ಟುಕೊಂಡನು.

ಬಸವನಿಗೆ ತನ್ನ ತಪ್ಪು ತಿಳಿಯದು. ತಪ್ಪುಗಾರ ನಿಜವಾಗಿ ಗೋವಿಂದ. ಅಪರಾಧಿ ತಾನು. ಶಿಕ್ಷೆ ಹೊಂದಿದವನು ತಾನು; ಎಲ್ಲ ವಿಚಿತ್ರವಾಗಿ ಕಂಡಿತು.. ನಿರ್ಜೀವ ಕಸಬರಿಗೆ ಅಡಿಗೆಯ ಮನೆಯಲ್ಲಿ ಮೂಲಿಗೆ ಒರಗಿ ಬಿದ್ದುಕೊಂಡಿದೆ ಅದರಿಂದ ತಪ್ಪೇನು? ಅಡಿಗೆಯ ಮನೆಯಲ್ಲಿ ಕಸಬರಿಗಿಂತಲೂ ಹೊಲಸಾದ ಒಡವೆಗಳಿಲ್ಲವೆ? ವ್ಯವಹಾರ ನಡೆಯುವದಿಲ್ಲವೆ? ಯಜಮಾನರ ಕೃಷ್ಣಕಾರಸ್ಥಾನ ಅಡಿಗೆಯಮನೆಯಲ್ಲಿಯೇ ಸಾಗುವದಿಲ್ಲವೇ? ಕಸಬರಿಗೆ ಎಂಥ ಹೆಚ್ಚಿನದು? ಇತ್ಯಾದಿ ಮಾತುಗಳು ಬಸವನ ತಲೆಯನ್ನು ಸೇರಿ ಯಜಮಾನತಿಯ ದರ್ಪದ ಅಧಿಕಾರವನ್ನು ನಿರ್ಣಯಿಸಲಿಕ್ಕೆ ಹೋಗಲಿಲ್ಲ. ತಾನು ನಿರಪರಾಧಿ. ಯಜಮಾನತಿಯ ಕೃತ್ಯ ದೋಷಪೂರ್ಣವಾದುದು. ಇದರ ನ್ಯಾಯ ದೇವರೇ ಬಲ್ಲನೆಂದು ಸುಮ್ಮನಾಗಿ ಮುಂದಿನ ಕೆಲಸಕ್ಕೆ ಹೋದನು.

ಮುಂದೆ ಎಂಟು-ಹತ್ತು ದಿನಗಳು ಕಳೆದವು.

ಸಂಜೆಯ ಕಾಯಿಪಲ್ಲೆಯನ್ನು ತರಲು ಬಸವನು ಪೇಟೆಗೆ ನಡೆದಿರುವನು. ಮನಸು ಮೊದಲಿನಂತೆ ಪ್ರಸನ್ನವಿಲ್ಲ. ಏನೋ ಎಣಿಕೆ ಹಾಕುತ್ತಿರುವನು. ದಾರಿ ಸಾಗಿದ್ದು ಅವನಿಗೆ ತಿಳಿಯದು. ವಿಚಾರದೊಳಗೇ ಪೇಟೆಗೆ ಬಂದನು. ಪಲ್ಲೆಯ ಪೇಟೆಯ ಮಲ್ಲಣ್ಣನು—ಏನು ಬೇಕು ಬಸವಾ? ಎಂದು ಕೇಳಲು ಎಚ್ಚತ್ತನು.

—ಸವತೀಕಾಯಿ ಬೇಕು. ಎಂದು ಬಸವನು ತಡವರಿಸುತ್ತ ಹೇಳಿದನು. ಇರಲಿಲ್ಲ. ಮುಂದೆ ನಡೆದನು. ಸುತ್ತೆಲ್ಲ ಹುಡುಕಿದನು. ಸವತೀಕಾಯಿಗಳು ಕಣ್ಣಿಗೆ ಬೀಳಲಿಲ್ಲ. ಯಜಮಾನತಿಯ ಕಟ್ಟಪ್ಪಣೆ! ಸವತೀಕಾಯಿಗಳು ಇಲ್ಲದೆ ಹೋದರೆ ಬೈಗಳು; ಬಡಿತಗಳು! ಮತ್ತಷ್ಟು ಹುಡುಕಿದನು. ಕಾಣಲಿಲ್ಲ. ಮನದಲ್ಲಿ ಅಯ್ಯೋ! ಅಂದನು. ಬರಿಗೈಯಿಂದ ಹೋದರೂ ಬೈಗಳು. ಬೇರೊಂದು ಪಲ್ಲೆಯನ್ನು ಒಯ್ದರೂ ಬೈಗಳು, ಏನು ಮಾಡಬೇಕೆಂದು ಚಿಂತಿಸಿದನು. ಮನೆಯ ದಾರಿಯ ಮೇಲೆ ಮುಳ್ಳು ಒಟ್ಟಿದಂತೆ ಕಂಡಿತು. ಯಜಮಾನತಿಯ ಕರಾಳ ರೂಪವು ದೂರದಿಂದ ತನ್ನನ್ನು ನೋಡಿ ಹೆದರಿಸಲಿದೆ ಎಂದು ಕಂಡಿತು. ಏನು ಮಾಡಬೇಕೆಂಬುದು ಕೊನೆಗೂ ತಿಳಿಯಲಿಲ್ಲ. ತಲೆಯ ಗಾಯವನ್ನು ಹಿಡಿದು ನೋಡಿದನು. ಇಂದೇ ಗುಣವಾಗಿದೆ! ತಲೆಯ ಇನ್ಯಾವ ಭಾಗ ಒಡೆಯಲಿದೆಯೋ ಎಂದು ತಲೆಯ ತುಂಬ ಕೈಯಾಡಿಸಿಕೊಂಡನು.

ಕಡೆಗೆ ತನ್ನ ಹಳೆಯ ಗೆಳೆಯನಾದ ಕೆಂಚಪ್ಪನನ್ನು ಕಂಡು ಮಾತಾಡಿಸಬೇಕೆಂದು ಅವನ ಮನೆಯ ದಾರಿಯನ್ನು ಹಿಡಿದನು. ಮನೆಯು ದೂರವಿರಲಿಲ್ಲ. ಶನಿವಾರ ಚಕಿಯ ಕೆಳಗಿನ ಮನೆಯೇ ಅವನದು. ಬೇಗ ಬೇಗ ನಡೆದನು.

ಪೇಟೆಯನ್ನು ಬಿಟ್ಟು ಅಡ್ಡದಾರಿಯಿಂದ ಹೆಜ್ಜೆ ಹಾಕಹತ್ತಿದನು. ಆಗ ಒಂದಿಷ್ಟು ಕತ್ತಲಾಗಿರಬೇಕು. ದಾರಿಯ ಮೇಲಿನ ದೀಪಗಳು ಇನ್ನೂ ಹತ್ತಿರಲಿಲ್ಲ. ಧನವಂತರ ಮನೆಯ ದೀಪದ ಪ್ರಕಾಶವು ದಾರಿಯ ಮೇಲೆ ಅಲಂಕಾರವಾಗಿ ಬಿದ್ದಿದ್ದಿತು.

ಶನಿವಾರಚೌಕಿಯ ಸಮೀಪಕ್ಕೆ ಬಂದಿರಬೇಕು. ಜನರ ಗದ್ದಲವು ಕಂಡಿತು. ಏನೆಂಬುದನ್ನು ನೋಡಲಿಕ್ಕೆ ತಾನೂ ಓಡಿದನು. ಸುತ್ತಲೆ ನಿಂತ ೫-೬ ಜನರನ್ನು ಕೇಳಿದನು. ಅವರು ತಮಗೆ ಗೊತ್ತಿಲ್ಲವೆಂದು ಹೇಳಿದರು. ತಿಳಿದುಕೊಳ್ಳಬೇಕೆಂಬ ಬಯಕೆಯು ಪ್ರಬಲವಾಯಿತು. ಯಜಮಾನತಿಯ ಗದರಿಕೆಯನ್ನು ಕ್ಷಣ ಹೊತ್ತು ಮರೆತು, ಗದ್ದಲದ ಒಳನುಗ್ಗಿದನು. ಅವನೆ ಆದರೆ ಇದೇನು? ವಿಚಿತ್ರ! ಜೀವನದಲ್ಲಿ ಕಾಣದ ಭಯಂಕರ ಸಂಗತಿಯನ್ನು ನೋಡುವ ಹೊತ್ತು ಬಂದಿತು! ತನ್ನ ಯಜಮಾನರಾದ ಶಾಮುರಾಯರು ಗಟಾರಿನಲ್ಲಿ ಬಿದ್ದಿರುವರು! ಐದಾರು ಜನರು ಅವರನ್ನು ಮೇಲೆ ಎತ್ತಿಹಾಕಲು ಪ್ರಯತ್ನಿಸುತ್ತಿರುವರು! ಖೂನಿಯೋ, ಬಡಿದಾಟವೋ ಯಾವದೂ ತಿಳಿಯದು! ಪ್ರಜ್ಞೆಯಿಲ್ಲದೆ ಹಾಗೇ ಬಿದ್ದಿರುವರು. ಶ್ವಾಸೋಚ್ಛ್ವಾಸದಿಂದ ಪ್ರಾಣವಿದೆ ಎಂದು ಅರಿತನು.

ರಾಯರು ಅಸ್ತವ್ಯಸ್ತರಾಗಿರುವರು. ಹೊಲಸು ನೀರಿನಿಂದ ಮೈಮೇಲಿನ ಅರಿವೆಗಳೆಲ್ಲ ನೆನೆದು ಹೋಗಿವೆ. ದಂಡೆಯ ಮೇಲೆ ಸರಿಯಾಗಿ ಕೂಡಲಿಕ್ಕೆ ಬರಲೊಲ್ಲರು. ಕುತ್ತಿಗೆಯನ್ನು ಸರಿಯಾಗಿ ನಿಲ್ಲಿಸಲೊಲ್ಲರು. ಬಾಯಲ್ಲಿ ಬುರುಗಿನ ಮುದ್ದೆ ತುಂಬಿಕೊಂಡು ಬರುತ್ತಿರುವದು ಆಗೀಗ ಏನೋ ನುಡಿಯುವರು. ಬಸವನ ಎದೆಕರಗಿ ನೀರಾಗಿ ಹೋಯಿತು. ಕಣ್ಣಲ್ಲಿ ನೀರೂರಿತು! ಗದ್ದಲವನ್ನು ಸರಿಸಿ ಮುಂದೆ ಹೋದನು. ಅರಿವೆಗಳನ್ನು ಸರಿಪಡಿಸಿದನು. ಬಾಯಲ್ಲಿಯ ಬುರುಗನ್ನು ಒರಸಿ ತೆಗೆದನು. ಹೆಗಲ ಮೇಲೆ ಹೊತ್ತನು. ಸಮೀಪದಲ್ಲಿ ನಿಂತ ಒಂದು “ಟಾಂಗಾ” ಬಾಡಿಗೆ ಮಾಡಿ ಮನೆಗೆ ಬಂದ

ಯಜಮಾನತಿಯು ಬಾಗಿಲಲ್ಲಿ ನಿಂತಿದ್ದಳು. ರಾತ್ರಿಯಾದರು ಬಸವನು ಬಾರದ್ದರಿಂದ ಕಿಡಿಕಿಡಿಯಾಗಿದ್ದಳು. ತನ್ನ ಸವತೀಕಾಯಿಗಳು ಬಾರದ್ದರಿಂದ, ರಾತ್ರಿಗೆ ಬಿಸಿಪಲ್ಲೆಗೆ ಅಡ್ಡಿಯಾದ್ದರಿಂದ ಕಣ್ಣಲ್ಲಿ ಕಿಡಿಯನ್ನು ತುಂಬಿಕೊಂಡು-ಸೂಳೇಮಗ ಬಸವನು ಬರಲಿ ಒಂದು ಕೈ ತೋರಿಸುವೆ ಎಂದು ಮನೆಸಿನವರಲ್ಲಿ ವಿಡಿಯುವೆಷ್ಟರಲ್ಲಿ ಬಸವನು ರಾಯರನ್ನು ಹೆಗಲ ಮೇಲೆ ಹಾಕಿಕೊಂಡು ಪಡಸಾಲೆಗೆ ಹೋದನು. ಇದೆಲ್ಲ ವಿಪರೀತವನ್ನು ಕಂಡು ಮಂಕಾಗಿ ಹೋದಳು. ಬಸವನು ತನ್ನ ಗಂಡನನ್ನು ಹೊತ್ತು ತಂದ ಸಂಗತಿಯು ಅರ್ಥವಾಗಲಿಲ್ಲ. ಬೆದರಿದಳು. ಬಾಯಿಬಿಟ್ಟಳು. ವಿನಯವನ್ನರಿಯದ-ಬಿಂಕದ, ಒಗರಿನ, ಅಭಿಮಾನದ ಯಜಮಾನತಿಯು “ಇದೇನು ಬಸವಾ?” ಎಂದು ಕಣ್ಣೊರಸಿಕೊಂಡಳು.

ಬಸವನು ಏನೂ ಮಾತಾಡಲಿಲ್ಲ.

ಯಜಮಾನರ ಮೈಮೇಲಿನ ಅರಿವೆಗಳನ್ನು ಬಿಚ್ಚಹತ್ತಿದನು?

-ಬಸವಾ, ಇವರಿಗೆ ಏನಾಯಿತು ಎಂದು ಅಂಗಲಾಚಿದಳು.

-ಸವತೀಕಾಯಿ ತರುವ ಮುಂದೆ....

ಅವನ ಮಾತನ್ನು ತಡೆದು—ಸವತೀಕಾಯಿ ಹಾಳಾಯಿತು. ಇವರಿಗೆ ಏನಾಯಿತು ಹೇಳು ಎಂದು ವಿನಯದಿಂದ ಕೇಳಿದಳು.

ಬಸವನು ಬೇರೆ ಬಟ್ಟೆಗಳನ್ನು ತೊಡಿಸಿದನು. ರಾಯರನ್ನು ಬೇರೊಂದು ಹಾಸಿಗೆಯ ಮೇಲೆ ಮಲಗಿಸಿದನು. ಪ್ರಥಮೋಪಚಾರವು ಮುಗಿಯಿತೆಂದು ಬಂದು ಉಸರುಗರೆದು ಗೋಡೆಗೆ ಆತು ಕುಳಿತನು.

-ಬಸವಾ ಏನಾಯಿತು?

-ನಿಮಗೆ ತಿಳಿಯದೇ ತಾಯಿ? ಅಂದನು.

-ಏನೂ ನನಗೆ ತಿಳಿಯದು ಎಂದಳು.

ರಾಯರು ಇನ್ನೂ ಚೆನ್ನಾದ ಸ್ಮೃತಿ ಮೇಲೆ ಬಂದಿರಲಿಲ್ಲ- ಬಾಯಿಂದ ಓಕರಿಕೆಯ ಬಿಕ್ಕುಗಳು ಬರುತ್ತಿದ್ದವು. ಕಣ್ಣು ತೆರೆದಿರಲಿಲ್ಲ. ಕೈಕಾಲುಗಳಲ್ಲಿ ಸಮನಾದ ಬಲವು ಬಂದಿರಲಿಲ್ಲ. ಬಸವನು ಏನೋ ವಿಚಾರಿಸಿದನು ತನ್ನ ಕೋಣೆಗೆ ಹೋದನು. ಒಂದೆರಡು ನಿಮಿಷದಲ್ಲಿ ತಾನುಣ್ಣುವ ಬಟ್ಟಲಲ್ಲಿ ಏನೋ ತಂದು ರಾಯರ ಗಂಟಲಿಗೆ ಸುರಿದನು ರಾಯರು ಹೇಗೋ ಕುಡಿದರು. ಒಂದೆರಡು ಸಾರೆ ಕಣ್ಣು ಪಿಳಕಿಸಿರಬೇಕು, ಯಜಮಾನರು ಕುಡಿದದ್ದೆಲ್ಲವನ್ನು ಕಾರಿದರು. ಯಜಮಾನತಿಯು ದಿಗ್ಭ್ರಾಂತಳಾಗಿ ಇದೆಲ್ಲವನ್ನು ನೋಡಿದಳು. ಬಸವನು ಸಮಾಧಾನವನ್ನು ತಾಳಿ ರಾಯರನ್ನು ಸರಿಯಾಗಿ ಮಲಗಿಸಿದನು

ರಾಯರು ಕಣ್ಣುಬಿಟ್ಟರು. ಬಸವನು ವಿನಯದಿಂದ ನಿಂತು

-ರಾಯರೇ ಈಗ ಆರಾಮವೇ ಎಂದನು.

-ಬಸವಾ ನೀನೇ ತಂದಿಯೇನು? ಎಂದು ಕೇಳಿದರು.

-ಹೌದು ರಾಯರೇ?

-ಎಲ್ಲಿಂದ?

ಬಸವನು ಎಲ್ಲವನ್ನು ಹೇಳಿದನು.

ಯಜಮಾನತಿಗೆ ಈಗ ಕಣ್ಣು ತೆರೆಯಿತು.— ತನ್ನ ಸರ್ವಸ್ವವೆಂದೂ ಪ್ರಾಣೇಶ್ವರನೆಂದೂ ತನ್ನ ಮಾಂಗಲ್ಯಸೂತ್ರದ ಅಧಿಪತಿಯೆಂದೂ ತನ್ನ ಪ್ರಾಣವೆಂದೂ ತಿಳಿದುಕೊಂಡ ಗಂಡನಿಗೆ ಸೆರೆ ಕುಡಿಯುವ ಚಟವಿರುವದೆಂದು ಯಜಮಾನತಿಗೆ ಆಗ ತಿಳಿಯಿತು.




ಜ್ಯೋತಿಷಿ:-ಕೃಷ್ಣಶಾಸ್ತ್ರಿ ಭಿಡೆ, ಭವಿಷ್ಯಕಥನ ಕಾರ್ಯಾಲಯ, ಖಡೇಬಜಾರ ಬೆಳಗಾವಿ

# ಎಪ್ರಿಲ ೧೫ ರಿಂದ ೨೨ ರ ವರೆಗೆ

## ಮೇಷ

ನಿಮ್ಮ ಪ್ರಕೃತಿ ಸಾಧಾರಣವೆ. ಆದರೆ ಹೆಂಡತಿಯದು ಮತ್ತು ಮಕ್ಕಳದು ಉತ್ತಮ ಆದರೆ ಅದನ್ನು ಬಿಟ್ಟು ಉಳಿದ ಎಲ್ಲ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಬಹಳ ಕಡಮೆ. ಸಮೀಪದ ಆಪ್ತರಿಂದ ಅಪಮಾನವಾಗುವಂತಹ ವರ್ತನೆ. ಸ್ಥಾವರದಲ್ಲಿ ಸ್ವಲ್ಪ ಹಾನಿ. ಉದ್ಯೋಗದಲ್ಲಿಯ ಪ್ರಗತಿಯಲ್ಲಿ ಬಹಳ ಅಡಚಣಿ. ಕಾಯದೆಯ ತೊಂದರೆ ಅತಿಶಯ ಆದರೆ ಪ್ರತಿಷ್ಠೆ ಮತ್ತು ಲಾಭ ಸಾಧಾರಣ ಅನುಕೂಲ. ಮಿತ್ರಸುಖ ಉತ್ತಮ ಶತ್ರುಗಳ ಜೋರೂ ಹೆಚ್ಚು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ವೆಚ್ಚ ಮತ್ತು ತೊಂದರೆ ಇಮ್ಮಡಿ ಆದರೆ ಅನುಕೂಲತೆಗಳ ಲಕ್ಷಣ ಉತ್ತಮ. ಸರಳ ಮಾತಾಡುವದು ಇಲ್ಲವೆ ಬರೆಯುವದು ಕೂಡ ಎರಡನೆಯವರಿಗೆ ವಿಪರೀತವೆನಿಸುವ ಪ್ರಸಂಗ. ಪ್ರವಾಸ ತೊಂದರೆಯದು. ಪತ್ರವ್ಯವಹಾರ ಮತ್ತು ಲೇಖೀ ಕೆಲಸಗಳು ಬಹಳ ತೊಂದರೆಯವು ಆದರೆ ಭೆಟ್ಟಿ ಸ್ವಲ್ಪ ಅನುಕೂಲ. ಅಶ್ವಿನಿಯ ಕೊನೆಯ ೨ ಮತ್ತು ಭರಣಿಯ ಮೊದಲನೆಯ ೨ ಚರಣಗಳಿಗೆ ಹೆಚ್ಚು ತೊಂದರೆ. ತಾ. ೧೭,೧೮, ೨೧ ಅನುಕೂಲ.

## ವೃಷಭ

ಪ್ರಕೃತಿಗೆ ಏನೂ ಆಗಿರದಿದ್ದರೂ ಕೆಟ್ಟ ಬಗ್ಗೆ ಮಾತ್ರ ಬಹಳ ಸಂಶಯ. ಉಳಿದವರೆಲ್ಲರಿಗೆ ಒಳಿತು. ಉಳಿದ ವಿಷಯಗಳಲ್ಲಿಯೂ ಪ್ರಾಪಂಚಿಕ ಸುಖ ಬಹಳ ಉತ್ತಮ. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭವೂ ಉತ್ತಮ ಆದರೆ ಸ್ಥಾವರದಲ್ಲಿ ಕೆಲ ಬಹಳ ದೊಡ್ಡ ಹಾನಿಯ ಬಾಬು ಉಂಟಾಗುವ ಅಂಜಿಕೆ. ವಾಹನಗಳಿಂದ ತೊಂದರೆ ಆದರೆ ಮನೆಯಲ್ಲಿಯ ನೋಕರನ ಢಾಜೀಲನಂತೆ ವರ್ತನ. ಉದ್ಯೋಗದಲ್ಲಿ, ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ಯಶಸ್ಸು ಮಿತ್ರ ಸುಖ ಉತ್ತಮ ಪರಸ್ತ್ರೀ ಬಗ್ಗೆ ಕುಬುದ್ಧಿಯಿಂದ ಒಳ್ಳೆ ಏಟ ಇಡುವ ಲೋಕಾಪವಾದ ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಅನುಕೂಲ. ಕೃತ್ತಿಕೆಯ ಕೊನೆಯ ೨ ಮತ್ತು ರೋಹಿಣಿಯ ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೧೫, ೧೯, ೨೦ ಅನುಕೂಲ.

## ಮಿಥುನ

ಪ್ರಕೃತಿ ಉತ್ತಮ ಸ್ತ್ರೀ ಸುಖ ಅನುಕೂಲ. ಆದರೆ ಅಪ್ರಿಯ ಜನರ ಸಹವಾಸದಿಂದ ಪ್ರಾಪಂಚಿಕ ಸುಖದಲ್ಲಿ ವಿರಸ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮ. ಮಿತ್ರರಲ್ಲಿ ಕೆಲ ಅಭಿನವ ಒಳ್ಳೆ ಸಾಹಸಗಳು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಅನುಕೂಲವೆ ಇದ್ದರೂ ತೊಂದರೆ ಮತ್ತು ವೆಚ್ಚ ಅಮಾನದಿಂದ ಬಹಳ ಹೆಚ್ಚು. ಪ್ರವಾಸಾದಿ ಕೆಲಸ ಸುಖಕರ. ಸ್ಥಾವರದಲ್ಲಿ ಸ್ವಲ್ಪ ಹೆಚ್ಚಳ. ಆರಿದ್ರೆಯ ಕೊನೆಯ ೨ ಮತ್ತು ಪುನರ್ವಸುವಿನ ಮೊದಲನೆ ೨ ಚರಣಗಳಿಗೆ ತೊಂದರೆಯಿಂದಲೇ ಯಶಸ್ಸು. ತಾ. ೧೬, ೧೭, ೧೮, ೨೧ ಅನುಕೂಲ.

## ಕರ್ಕ

ನಿಮ್ಮ ಪ್ರಕೃತಿ ಅನುಕೂಲ ಆದರೆ ಹೆಂಡತಿಯದು ಬಹಳ ಕೆಡುವದು. ಆದರೂ ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಬಹಳ ಉತ್ತಮ. ಸ್ಥಾವರದಲ್ಲಿ ಬಹಳ ಹೆಚ್ಚಳ. ಇಲ್ಲವೆ ಹೆಚ್ಚು ಉತ್ಪನ್ನ ಬರುವಂಥ ಬಾಬುಗಳನ್ನು ಸುರುಮಾಡುವ ಯೋಗ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮ ಆದರೆ ಸಂಗ್ರಹಕ್ಕೆ ಕೈಹಚ್ಚಬೇಕಾಗುವಂತೆ ಭಾರವಾದ ವೆಚ್ಚ. ವಾದದಲ್ಲಿ ಉಭಯ ಪಕ್ಷಗಳಲ್ಲಿ ಸಮಾನ ಸ್ಥಿತಿ ಮಿತ್ರರಲ್ಲಿ ಕ್ರೋಧ. ಪ್ರವಾಸಾದಿ ಕೆಲಸ ಅನುಕೂಲ. ಪುಷ್ಯದ ಕೊನೆಯ ೨ ಮತ್ತು ಆಶ್ಲೇಷಾದ ಮೊದಲನೆ ೨ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು. ತಾ. ೧೫, ೧೯, ೨೦ ಅನುಕೂಲ.

## ಸಿಂಹ

ಪ್ರಕೃತಿ ಉತ್ತಮ. ಸ್ತ್ರೀ ಸುಖ ಅನುಕೂಲ ಆದರೆ ಪ್ರಾಪಂಚಿಕ ಕಿಟಕಿಟ ಬಹಳ ಹೆಚ್ಚಿ ಸಣ್ಣ ದೊಡ್ಡ ಕೆಲಸಗಳಲ್ಲಿ ತಿಕ್ಕಾಟ ಇಲ್ಲವೆ ಕೈಗೆ ಕೈ ಹತ್ತುವ ಪ್ರಸಂಗ. ಸ್ಥಾವರದಲ್ಲಿ ಶತ್ರುವೆಂದು ಎನಿಸಿಕೊಳ್ಳುವ ಯಾವನೊಬ್ಬನಿಂದ ಬಹಳ ಉಪದ್ರವ. ಉದ್ಯೋಗ ಪ್ರಗತಿ ಸ್ವಲ್ಪಾದರೂ ತದ್ವಿರುದ್ಧ ವೆಚ್ಚವೂ ಹೆಚ್ಚುವದು. ಲಾಭ ಮತ್ತು ಪ್ರತಿಷ್ಠೆ ಜನರಿಗೆ ವ್ಯವಸ್ಥಿತ ಎಂದೆನಿಸಿದರೂ ವಸ್ತುಸ್ಥಿತಿ ತದ್ವಿರುದ್ಧವಾಗಿರುವದು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ವೆಚ್ಚ ಬಹಳ. ಉಭಯ ಪಕ್ಷದವರೂ ಖೊಟ್ಟಿ ಕೆಲಸ ಮಾಡುವ ಪೇಚು. ಅನುಕೂಲತೆಯ ಒಲವು ಮಾತ್ರ ನಿಮ್ಮ ಕಡೆಗೇ ಮಿತ್ರರಲ್ಲಿ ಕ್ಲೇಶ ಕೆಲವು ಪದಾರ್ಥಗಳು ನೋಡನೋಡುವದರಲ್ಲಿಯೆ ಇಲ್ಲದಂತಾಗುವ ಇಲ್ಲವೆ ಕಳವಾಗಿ ಹೋಗುವ ಸಂಭವ ಪ್ರವಾಸ ಮತ್ತು ಪತ್ರವ್ಯವಹಾರಕ್ಕಿಂತ ಭೆಟ್ಟಿ ಅನುಕೂಲ. ಮಘಾದ ಕೊನೆಯ ೨ ಮತ್ತು ಪೂರ್ವಾದ ಮೊದಲನೆ ೨ ಚರಣಗಳಿಗೆ ತೊಂದರೆ ಹೆಚ್ಚು. ತಾ. ೧೫, ೧೬, ೧೭ ಅನುಕೂಲ.

## ಕನ್ಯಾ

ಪ್ರಕೃತಿ ಮತ್ತು ಸ್ತ್ರೀ ಸುಖ ಅನುಕೂಲ. ಮಕ್ಕಳಿಗೆ ಸ್ವಲ್ಪ ಕ್ಲೇಶ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಸಾಮಾನ್ಯ ಅನುಕೂಲ. ಆದರೆ ದ್ರವ್ಯ ಲಾಭ ಅಮಾನದಿಂದ ಬಹಳ ಹೆಚ್ಚು. ಮಿತ್ರಸುಖ ಉತ್ತಮ ಅವಚಿತ ಲಾಭದ ಸಂಭವವೂ ಉಂಟು. ಸುಖ ಸ್ವಪ್ನಗಳು ಮತ್ತು ಸುಖ ಸೂಚನೆಗಳು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಡಂಬಡಿಕೆಯ ಯೋಗ ಹೆಚ್ಚು. ಪ್ರವಾಸ ತೊಂದರೆಯದು ಆದರೆ ಭೆಟ್ಟಿ ಮತ್ತು ಪತ್ರವ್ಯವಹಾರ ಅನುಕೂಲ. ಉತ್ತರಾದ ಕೊನೆಯ ೨ ಮತ್ತು ಹಸ್ತಾದ ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೧೫, ೧೬, ೧೭, ೧೮ ಅನುಕೂಲ.

## ತುಲಾ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಅನುಕೂಲ. ಆದರೆ ಶತ್ರು ಮತ್ತು ಬಾಂಧವರಿಂದ ಬಹಳ ತೊಂದರೆ ಮತ್ತು ಅಪಮಾನ ಮಾಡುವ ಬೀಭತ್ಸ ಪ್ರಯತ್ನ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಅಷ್ಟಕ್ಕಷ್ಟೆ ಆದರೆ ಲಾಭ ಅನುಕೂಲ ಆತ್ಮಸುಖಕ್ಕಾಗಿ ಕೆಲಸ ಮಾಡಲ್ಪಡುವ ಪಾರಮಾರ್ಥಿಕ ಕೃತ್ಯಗಳು ಮಿತ್ರ ಸುಖ ಉತ್ತಮ. ಪ್ರವಾಸಾದಿ ಕೆಲಸ ತೊಂದರೆಯದು. ಸ್ವಾತಿಯ ಕೊನೆಯ ೨ ಮತ್ತು ವಿಶಾಖಾದ ಮೊದಲನೆ ೨ ಚರಣಗಳಿಗೆ ತೊಂದರೆಯಿಂದ ಯಶಸ್ಸು ತಾ. ೧೭, ೧೮, ೧೯, ೨೦ ಅನುಕೂಲ.

## ವೃಶ್ಚಿಕ

ಪ್ರಕೃತಿ ನಿಮ್ಮದು ಅನುಕೂಲವಿದ್ದರೂ ಹೆಂಡತಿಯದು ಕೆಡುವದು ಏನಿಲ್ಲೆಂದರೂ ತತ್ಸುಖದಲ್ಲಿ ಬಹಳ ವಿರಸ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭವೂ ಬಹಳ ಉತ್ತಮ ಆದರೆ ನಿರರ್ಥಕ ಮತ್ತು ಕೇವಲ ಚೈನಿಗಾಗಿ ಬಹಳ ವೆಚ್ಚ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಸ್ವತಃ ಹಿಮ್ಮೆಡುವದು ಆದರೆ ಪರಭಾರೆ ಉಂಟಾಗುವ ಸಂಕಟಗಳಿಂದ ಶತ್ರುಗಳು ಚಲ್ಲಾಪಿಳ್ಳಿಯಾಗುವರು ಮಿತ್ರಸುಖ ಉತ್ತಮ. ಪರಸ್ತ್ರೀ ಬಗ್ಗೆ ಕುಬುದ್ಧಿಯ ಚಟ. ಪ್ರವಾಸಾದಿ ಕೆಲಸ ಸುಖಕರ ಅನುರಾಧೆಯ ಕೊನೆಯ ೨ ಮತ್ತು ಜ್ಯೇಷ್ಠಾದ ಮೊದಲನೆ ೨ ಚರಣಗಳಿಗೆ ತೊಂದರೆಯಿಂದ ಯಶಸ್ಸು. ತಾ. ೧೫, ೧೯, ೨೦ ಅನುಕೂಲ.

## ಧನು

ಪ್ರಕೃತಿ ಉತ್ತಮ. ಸ್ತ್ರೀ ಸುಖ ಅನುಕೂಲ ಆದರೆ ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ತೊಂದರೆ ಬಹಳ ಆಗುವದು. ಉದ್ಯೋಗದಲ್ಲಿ ಉತ್ತಮ ಪ್ರಗತಿ ಒಳ್ಳೆ ಪ್ರತಿಷ್ಠೆ ಮತ್ತು ಅಂದಾಜಿಗಿಂತ ಹೆಚ್ಚು ಲಾಭ ಮತ್ತು ವೆಚ್ಚವೂ ಕಡಮೆಯಾಗಿ ಸಂಗ್ರಹ ಹೆಚ್ಚುವದು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಯಶಸ್ಸು ದೊರೆತರೂ ಶತ್ರುಗಳಿಂದ ಚಮತ್ಕಾರಿಕವಾದ ಉಪದ್ರವ. ಮಿತ್ರ ಸುಖ ಉತ್ತಮ. ಪ್ರವಾಸಾದಿ ಕೆಲಸ ಹಿತಕರ. ಮೂಲಾದ ಕೊನೆಯ ೨ ಮತ್ತು ಪೂರ್ವಾದ ಮೊದಲನೆಯ ೨ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು. ತಾ. ೧೫, ೧೬, ೧೭, ೧೮ ಅನುಕೂಲ.

## ಮಕರ

ಪ್ರಕೃತಿ ಬಹಳ ಉತ್ತಮ. ಆದರೆ ಪ್ರಾಪಂಚಿಕ ಸುಖ ಕಡಮೆ ದೊರೆತೂ ಪ್ರತಿಯೊಂದು ವಿಷಯದಲ್ಲಿ ಹೆಂಡತಿಯ ವಿರೋಧ. ಉದ್ಯೋಗದಲ್ಲಿ ಪ್ರಗತಿ ಹೆಚ್ಚು. ಪ್ರತಿಷ್ಠೆಯಲ್ಲಿ ಹೆಚ್ಚಳ ಮತ್ತು ಲಾಭವೂ ಹೆಚ್ಚು. ಮಿತ್ರ ಸುಖ ಉತ್ತಮ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ಯಶಸ್ಸು. ಪ್ರವಾಸಾದಿ ಕೆಲಸ ಹಿತಕರ. ಉತ್ತರಾಷಾಢಾದ ಕೊನೆಯ ೨ ಮತ್ತು ಶ್ರವಣಾದ ಮೊದಲನೆ ೨ ಚರಣಗಳಿಗೆ ಹೆಚ್ಚು ಅನುಕೂಲ. ತಾ. ೧೫, ೧೬, ೧೭. ೧೮ ಅನುಕೂಲ.

## ಕುಂಭ

ಪ್ರಕೃತಿ ಉತ್ತಮ ಸ್ತ್ರೀ ಸುಖ ಮನಸ್ಸಿನಂತೆ ಉಳಿದ ಪ್ರಾಪಂಚಿಕ ವಿಷಯಗಳಲ್ಲಿ ಕೆಲ ಸಮಯ ಆನಂದ ಬೇರೆ ಸಮಯದಲ್ಲಿ ಅಷ್ಟೇ ಉದ್ವೇಗ. ಉದ್ಯೋಗದಲ್ಲಿ ಪ್ರಗತಿ ಉತ್ತಮ. ಆದರೆ ಪ್ರತಿಷ್ಠೆ ಮತ್ತು ಲಾಭ ಬಹಳ ತೊಂದರೆಯಿಂದ ಸಾಧ್ಯ ಪೂಜ್ಯ ಜನರ ದರ್ಶನ ಇಲ್ಲವೆ ಸಹವಾಸ ಪಾರಮಾರ್ಥಿಕ ವಿಷಯಗಳ ವಿಚಾರ ಹೆಚ್ಚು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಅನುಕೂಲ ಸ್ಥಿತಿ. ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಹೆಚ್ಚು ಅನುಕೂಲ. ಶತತಾರಿಕೆಯ ಕೊನೆಯ ೨ ಮತ್ತು ಪೂರ್ವಾಭಾದ್ರಪದದ ಮೊದಲನೆ ೨ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು. ತಾ. ೧೭, ೧೮, ೧೯, ೨೦ ಅನುಕೂಲ.

## ಮೀನ

ಪ್ರಕೃತಿ ಮತ್ತು ಸ್ತ್ರೀ ಸುಖ ಉತ್ತಮ. ಮಾನ ಮತ್ತು ಧನದಿಂದ ಉಚ್ಚ ಆದರೆ ಮನಸ್ಸಿನಿಂದ ನೀಚ ವೃತ್ತಿಯಿದ್ದ ಜನರ ಸಹವಾಸವುಂಟಾಗುವದರಿಂದ ಮನಸ್ಸಿನಲ್ಲಿ ಚೈನಿಯಿಲ್ಲ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಬಹಳ ಉತ್ತಮ ಆದರೆ ಲಾಭ ಬಹಳ ಕಡಮೆ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳ ಸಮಾನಸ್ಥಿತಿ. ಪ್ರವಾಸಾದಿ ಕೆಲಸ ಬಹಳ ಹಿತದ್ದು ಉತ್ತರಾಭಾದ್ರಪದದ ಕೊನೆಯ ೨ ಮತ್ತು ರೇವತಿಯ ಮೊದಲನೆ ೨ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು. ತಾ. ೧೫, ೧೯, ೨೦, ೨೧ ಅನುಕೂಲ.

ಈ ಪತ್ರಿಕೆಯು ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ ರಾಷ್ಟ್ರೀಯ ವಾಙ್ಮಯ ಪ್ರಕಾಶನ ಟ್ರಸ್ಟಿನ ಪರವಾಗಿ ಹ. ರಾ. ಮೋಹರೆಯವರಿಂದ ಮುದ್ರಿತ ಪ್ರಕಟವಾಯಿತು.

# ಸಾರ್ವಜನಿಕ ಪ್ರಕಟನೆ

ಹುಬ್ಬಳ್ಳಿ ಸೀದಾ ಕ್ಷೇತ್ರದಲ್ಲಿ ಸಕ್ಕರೆಯ ಹಂಚಿಕೆಯ ಪ್ರಮಾಣದಲ್ಲಿ ಕಡಿತ.

## ಪ್ರಕಟನೆ

ನಾಗರಿಕ ಪೂರೈಕೆ ಖಾತೆ,

ಮುಂಬಯಿ ಕೋಟೆ, ೨೮ ಮಾರ್ಚ ೧೯೪೬

**ಮುಂಬಯಿ ಸೀದಾ ಆಜ್ಞೆ ೧೯೪೩.**

ನಂ. ೧೬೯ (೧೬ ಅ) /ಅ ಆರ್. :— ೧೯೪೩ ನೇ ಇಸ್ವಿಯ ಮುಂಬಯಿ ಸೀದಾ ಆಜ್ಞೆಯ ೧೨ ನೇ ಕಲಮನ್ನನುಸರಿಸಿ, ೧೯೪೪ ನೇ ಇಸ್ವಿಯ ಹುಬ್ಬಳ್ಳಿ ಸೀದಾ ಆಜ್ಞೆಯನ್ನು ತಾ. ೩೧ ಮಾರ್ಚ ೧೯೪೬ ರಿಂದ ಕೆಳಗೆ ಕೊಟ್ಟ ಪ್ರಕಾರ ತಿದ್ದುಪಡಿ ಮಾಡಿರುವದಾಗಿ ಮುಂಬಯಿ ಸರಕಾರದವರು ತಿಳಿಸುತ್ತಾರೆ. ಆ ತಿದ್ದುಪಡಿ ಏನೆಂದರೆ :—

ಆ ಆಜ್ಞೆಯ ೧೯ ನೇ ಕಲಮಿನ (೨)ನೇ ಉಪಕಲಮಿನಲ್ಲಿ ೨೨ ನೇ ಕಲಮಿನ (೪)ನೇ ಉಪಕಲಮಿನಲ್ಲಿ ಮತ್ತು ೩೩ ನೇ ಕಲಮಿನ (೩) ನೇ ಉಪಕಲಮಿನಲ್ಲಿ "೫" ಅಂಕಿಯ ಬದಲು "3½" ಅಂಕಿಗಳನ್ನು ಸೇರಿಸತಕ್ಕದ್ದು.

ಸೂಚನೆ :— ಭಾರತ ಸಂರಕ್ಷಣ ಕಾಯಿದೆಯ ೧೧೯ ನೇ ನಿಯಮದ [೧] ನೇ ಉಪನಿಯಮಕ್ಕನುಸಾರವಾಗಿ ಕೆಳಗೆ ಕೊಟ್ಟ ಪ್ರಕಾರಗಳಿಂದ ಈ ಪ್ರಕಟನೆಯು ಪ್ರಸಿದ್ಧವಾಗತಕ್ಕದ್ದು.:—

(ಅ) ಮುಂಬಯಿ ಸರಕಾರದ ಗ್ಯಾಝೆಟದಲ್ಲಿ ಅದನ್ನು ಪ್ರಸಿದ್ಧಿಸಲಾಗುವದು.

(ಬ) ಕೆಳಗಿನ ಪತ್ರಿಕೆಗಳಲ್ಲಿ ಅದನ್ನು ಪ್ರಸಿದ್ಧಿಸಲಾಗುವದು. :-

(೧) ಸಂಯುಕ್ತ-ಕರ್ನಾಟಕ; ಹುಬ್ಬಳ್ಳಿ

(೨) ಕರ್ನಾಟಕ ಬಂಧು, ಗದಗ

(೩) ಕರ್ಮವೀರ, ಹುಬ್ಬಳ್ಳಿ

(ಕ) ಹುಬ್ಬಳ್ಳಿ ಸೀದಾ ಕ್ಷೇತ್ರಗಳೊಳಗಿನ ರೆವಿನ್ಯೂ ಮತ್ತು ಉಳಿದ ಸರಕಾರಿ ಕಚೇರಿಗಳಲ್ಲಿ ಈ ಉದ್ದೇಶಕ್ಕಾಗಿ ಇರುವ ನೋಟೀಸ ಬೋರ್ಡುಗಳಿಗೆ ಅದರ ಪ್ರತಿಗಳನ್ನು ಅಂಟಿಸಲಾಗುವದು.

(ಡ) ಈ ಪ್ರಕಟನೆಯ ಹೇಳಿಕೆಗಳನ್ನು ಸ್ಥಳದಲ್ಲಿ ಸ್ಪಷ್ಟೀಕರಿಸುವ ಪತ್ರಿಕಾ— ಸೂಚನೆಯನ್ನು ಹೊರಡಿಸತಕ್ಕದ್ದು.

ಮುಂಬಯಿ ಗವ್ಹರ್ನರರ ಆಜ್ಞೆಯ ಪ್ರಕಾರ

**ಡಿ. ಎಸ್. ಬಖಲೆ**

ಕಾರ್ಯದರ್ಶಿ

## ಪತ್ರಿಕಾ-ಸೂಚನೆ

ಭಾರತದಲ್ಲಿ ಸಕ್ಕರೆಯ ಅಪೇಕ್ಷಿತ ಹುಟ್ಟುವಳಿಯಲ್ಲಿ ಕಡಿಮೆಯಾಗಿರುವ ಮೂಲಕ ಕೇಂದ್ರ ಸರಕಾರದವರು ಸಕ್ಕರೆಯ ಪ್ರಾಂತಿಕ ಭಾಗ (quota) ವನ್ನು ಇಳಿಸಿದ್ದಾರೆ. ಹೀಗೆ ಉಂಟಾದ ಕಡಿತವನ್ನು ಅವಶ್ಯವಾಗಿ ಸರಿಪಡಿಸಿಕೊಳ್ಳುವದರ ಸಲುವಾಗಿ ಹುಬ್ಬಳ್ಳಿಯ ಸೀದಾ ಕ್ಷೇತ್ರದಲ್ಲಿ ಕುಟುಂಬದ ಉಪಯೋಗಕ್ಕಾಗಿ ಕೊಡುತ್ತಿರುವ ಸಕ್ಕರೆಯ ಹಂಚಿಕೆಯ ಪ್ರಮಾಣವನ್ನು ಪ್ರತಿಯೊಂದು ವಾರಕ್ಕೆ ಪ್ರತಿಯೊಂದು ವ್ಯಕ್ತಿಗೆ ೧೦ ಔನ್ಸಗಳಿಂದ ೭ ಔನ್ಸಗಳಿಗೆ ಮುಂಬಯಿ ಸರಕಾರದವರು ಇಳಿಸಿರುತ್ತಾರೆ. ಈ ಕಡಿತವನ್ನು ತಾ ೩೧-೩-೪೬ ರಿಂದ ಜಾರಿಯಲ್ಲಿ ತರಲಾಗುವದು. ಮೂಲ ಸೀದಾ ಕಾರ್ಡುಗಳ ಮತ್ತು ಸಪ್ಲಿಮೆಂಟರಿ ಸಕ್ಕರೆ ಕಾರ್ಡುಗಳ ಮೇಲಿನ ಒಂದು ಯುನಿಟ್ಟಿಗೆ ಪ್ರಮಾಣವು ೫ ಔನ್ಸಗಳ ಬದಲು 3½ ಔನ್ಸಗಳಾಗುವದು.

ಆ ತಾರೀಖಿನಿಂದ ಫಲಹಾರದಅಂಗಡಿಗಳ ಸಕ್ಕರೆಯ ಹಂಚಿಕೆಯ ಹಕ್ಕಿನಭಾಗ(quota)ವನ್ನು೧೦೦ಕ್ಕೆ ೨೫ ರಂತೆ ಇಳಿಸಲಾಗುವದು-ಫಲಹಾರದಅಂಗಡಿಗಳಿಗೆ ಕೊಟ್ಟ ಸೀದಾ ಪರ್ಮಿಟಗಳ ಮೇಲಿನ ಒಂದು ಯುನಿಟ್ಟಿನ ಪ್ರಮಾಣವನ್ನು ೫ ಔನ್ಸಗಳಿಂದ 3½ ಔನ್ಸಗಳಿಗೆ ಇಳಿಸಲಾಗುವದುಆದರೆ ಮಿಠಾಯಿಗಾರರ ಹಾಗು ಸಿಹಿತಿಂಡಿ ತಯಾರಕರ ಹಕ್ಕಿನ ಭಾಗ(quota)ದಲ್ಲಿ ೫೦ % ಕಡಿತವನ್ನು ಮಾಡಲಾಗುವದು ಮತ್ತು ಸುಧಾರಿಸಿದ ಸೀದಾ ಪರ್ಮಿಟುಗಳನ್ನು ಅವರಿಗೆ ಕೊಡಲಾಗುವದು. ಅಸ್ಪತ್ರೆಗಳ ಮತ್ತು ಜೈಲಿನ ಅಸ್ಪತ್ರೆಗಳ ಸಕ್ಕರೆಯ ಹಕ್ಕಿನ ಭಾಗ(quota)ಗಳಲ್ಲಿ ಏನೂ ಕಡಿತವನ್ನು ಮಾಡಲಾಗುವದಿಲ್ಲ.

೧೯೪೪ ನೇ ಇಸ್ವಿಯ ಹುಬ್ಬಳ್ಳಿ ಸೀದಾ ಆಜ್ಞೆಯಲ್ಲುಂಟಾದ ಅವಶ್ಯಕ ತಿದ್ದುಪಡಿಗಳನ್ನು ಮುಂಬಯಿ ಸರಕಾರದ ಗ್ಯಾಝೆಟದಲ್ಲಿ ಪ್ರಸಿದ್ಧಿಸಲಾಗಿದೆಯೆಂದು ಮುಂಬಯಿಯ ಪೂರೈಕೆ ಕಮಿಶನರರು ಹೊರಡಿಸಿದ ಪತ್ರಿಕಾ- ಸೂಚನೆಯಲ್ಲಿ ಹೇಳಿದೆ.